# ದೊಡ್ಡಪುರ ಗ್ರಾಮದ ಗಾದೆಗಳ ಸಂದರ್ಭ ಮತ್ತು ಮೌಲ್ಯ

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ


ನಿಬಂಧಕಾರರು

**ಡಿ.ಸಿ.ಹೇಮಲತಾ**
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಆರ್.ವಿ.ಎಸ್.ಸುಂದರಂ**
ವಿಶ್ರಾಂತ ಪ್ರಾಧ್ಯಾಪಕರು ಮತ್ತು ನಿರ್ದೇಶಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು - ೫೭೦ ೦೦೬





ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೮-೦೯

# ದೊಡ್ಡಪುರ ಗ್ರಾಮದ ಗಾದೆಗಳ ಸಂದರ್ಭ ಮತ್ತು ಮೌಲ್ಯ

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ನಿಬಂಧಕಾರರು

**ಡಿ.ಸಿ.ಹೇಮಲತಾ**
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು





ಮಾರ್ಗದರ್ಶಕರು

**ಡಾ. ಆರ್.ವಿ.ಎಸ್.ಸುಂದರಂ**
ವಿಶ್ರಾಂತ ಪ್ರಾಧ್ಯಾಪಕರು ಮತ್ತು ನಿರ್ದೇಶಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು - ೫೭೦ ೦೦೬



**ಕನ್ನಡ ವಿಶ್ವವಿದ್ಯಾಲಯ, ಹಂಪಿ**
೨೦೦೮-೦೯

## ದೃಢೀಕರಣ ಪತ್ರ

೨೦೦೮-೦೯ನೇ ಸಾಲಿನಲ್ಲಿ ಕ್ರಮ ಸಂಖ್ಯೆ KVT MKS - ೦೦೩೨೩ರ ವಿದ್ಯಾರ್ಥಿನಿಯಾದ ಡಿ.ಸಿ.ಹೇಮಲತಾ ಎಂ.ಫಿಲ್. ಪರೀಕ್ಷೆಯ ಅಂಗವಾಗಿ 'ದೊಡ್ಡಪುರ ಗ್ರಾಮದ ಗಾದೆಗಳ ಸಂದರ್ಭ ಮತ್ತು ಮೌಲ್ಯ' ಎಂಬ ವಿಷಯವನ್ನು ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಇದನ್ನು ಇವರು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೊಮೋ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯದಲ್ಲಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:
15-9-2009
ಮೈಸೂರು

ಆರ್.ವಿ.ಎಸ್. ಸುಂದರಂ

**ಡಾ. ಆರ್. ವಿ. ಎಸ್. ಸುಂದರಂ**
ವಿಶ್ರಾಂತ ಪ್ರಾಧ್ಯಾಪಕರು ಮತ್ತು ನಿರ್ದೇಶಕರು,
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,
ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

# ಅಭ್ಯರ್ಥಿಯ ಘೋಷಣಾಪತ್ರ

**"ದೊಡ್ಡಪುರ ಗ್ರಾಮದ ಗಾದೆಗಳ ಸಂದರ್ಭ ಮತ್ತು ಮೌಲ್ಯ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ KVTMKS - 00323ರ ವಿದ್ಯಾರ್ಥಿಯಾದ ನಾನು ೨೦೦೮–೦೯ನೇ ಸಾಲಿನ ಪರೀಕ್ಷೆಗಾಗಿ **ಡಾ. ಆರ್.ವಿ.ಎಸ್. ಸುಂದರಂ** ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Hemalatha DC

ಮೈಸೂರು
ದಿನಾಂಕ : 15-09-2009

**(ಡಿ.ಸಿ.ಹೇಮಲತ)**
೨೦೦೮–೦೯ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿನಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಪ ರಿ ವಿ ಡಿ



*****

# ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ರಸಾನುಭವವೇ ಸಾಹಿತ್ಯ. ಸಾಹಿತ್ಯವನ್ನು ಶಿಷ್ಟ ಮತ್ತು ಜನಪದ ಎಂದು ಎರಡು ಭಾಗಗಳಾಗಿ ವಿಂಗಡಿಸಿ ನೋಡಬಹುದು. "ಕವಿ ವಾಣಿ ಹೂವು ಜನವಾಣಿ ಬೇರು. ಗರಿಕೆ ಸಂಸ್ಕೃತಿಯ ಪ್ರತೀಕ ಜಾನಪದ. ಕೋಗಿಲೆಯ ಪದದಂತೆ ಜನಪದ ಸಾಹತ್ಯ ಹಿತ ಮಧುರ ಮುಗ್ಧ ಮನಸ್ಸುಗಳು, ಸ್ವಚ್ಛಂದ ಬದುಕಿನ ನೇರ ನುಡಿಯ ಜನರಿಂದ ದನಿಗೂಡಿದ ಜೀವನಾನುಭವ ಸಾರ ಜನಪದ ಸಾಹಿತ್ಯ. ನಯ ನಾಜೂಕಿನ ಶಿಷ್ಟ ಸಾಹಿತ್ಯದ ತಾಯಿಬೇರು ಜನಪದ ಸಾಹಿತ್ಯ.

ಜನಪದ ಸಾಹಿತ್ಯದಲ್ಲಿ ಅನೇಕ ಪ್ರಕಾರಗಳಿವೆ. ಐತಿಹ್ಯ, ಪುರಾಣ, ಜನಪದ ಗೀತೆ, ಗಾದೆ, ಒಗಟು, ಕಥೆ ಮುಂತಾದವು ಪ್ರಮುಖ ಪ್ರಕಾರಗಳಾಗಿವೆ. ಜನಪದ ಸಾಹಿತ್ಯ ಪ್ರಕಾರಗಳಲ್ಲೆಲ್ಲ ಗಾದೆಯೇ ಅತ್ಯಂತ ಜನಪ್ರಿಯವಾದುದು. ಮಾನವ ಸಮಾಜದಲ್ಲಿ ಇದರಷ್ಟು ವ್ಯಾಪಕವಾದ ಪ್ರಭಾವಶಾಲಿಯಾದ ಆಕರ್ಷಣೀಯವಾದ ಪ್ರಯೋಜನಕಾರಿಯಾದ ಸಾಹಿತ್ಯ ಪ್ರಕಾರ ಇನ್ನೊಂದಿಲ್ಲ.

ಜನಪದರ ಬದುಕಿನ ಬಗ್ಗೆ ಜನಪದ ಸಾಹಿತ್ಯ ಬಗ್ಗೆ ಮಾತನಾಡಬೇಕೆಂದರೆ ಮನಸ್ಸಿಗೆ ಒಂದು ರೀತಿಯ ತನ್ಮಯವಾಗುತ್ತದೆ. ನಿಷ್ಕಲ್ಮಷ ಮನಸ್ಸುಗಳ ಬಗ್ಗೆ ಮಾತನಾಡಬೇಕೆಂದರೆ ಒಂದು ಕ್ಷಣ ಮನಸ್ಸು ಭಯಗೊಳ್ಳುತ್ತದೆ. ಆದರೆ ಮನಸ್ಸಿಗೆ ತುಂಬಾನೆ ಸಂತೋಷ ಆಗುತ್ತದೆ. ಅಕ್ಷರಬಲ್ಲವರಿಗಿಂತ ಜನಪದರು ತುಂಬಾ ಬುದ್ಧಿವಂತರು. ಲೆಕ್ಕಾಚಾರದ ವಿಷಯದಲ್ಲಿ, ಜೀವನ ನಿರ್ವಹಣೆಯಲ್ಲಿ, ಸಾಂಸಾರಿಕ ಜೀವನದಲ್ಲಿ, ವ್ಯವಹಾರಿಕವಾಗಿ ಜನಪದರ ಕೌಶಲ್ಯ, ಸಾಮರಸ್ಯ, ಹೊಂದಾಣಿಕೆ, ಲಿಂಗ ಮೆಚ್ಚಿ ಹೌದು ಎನ್ನುವ ರೀತಿ ಇರುತ್ತದೆ.

ಜನಪದರ ಮಾತಿನಲ್ಲಿ ಮಧುರತೆ ಇರುತ್ತದೆ. ಅದರಲ್ಲಿಯೂ ಜನಪದರು ಜೀವನದ ರೀತಿ ನೀತಿಗಳನ್ನು ಸಾಂಪ್ರದಾಯಿಕವಾಗಿ ಮತ್ತು ಸಾಮಾಜಿಕವಾಗಿ ಇರಬೇಕೆಂದು ಬಯಸುತ್ತಾರೆ. ಮನುಷ್ಯನ ನಡವಳಕೆಗಳು ಕರಾರುವಾಕ್ಕಾಗಿ ಇರುವಂತೆ ಕಾನೂನಿನಂತೆ ಮಾತಿನ ಸ್ಪಷ್ಟತೆಗಾಗಿ ಬಳಸುವುದು ಗಾದೆಗಳು. ಜನಪದರಲ್ಲಿ ರೂಢಿ-ಸಂಪ್ರದಾಯಗಳು, ಗಾದೆಗಳು, ಶಾಸನಗಳಂತೆ ಕಾರ್ಯ ನಿರ್ವಹಿಸುತ್ತವೆ. ಮನುಷ್ಯನ ಗುಣ ಸ್ವಭಾವಗಳು ಸುಧಾರಣೆಗೊಂಡು ಅವನು ಸಭ್ಯಸ್ಥನಾಗಿರುವಂತೆ ಗಾದೆಗಳು ಮಾರ್ಗದರ್ಶನ ಮಾಡುತ್ತವೆ.

"ಕುಯ್ಯೋನಿಗೆ ಒಂದು ಕುಡುಲು
ಮಾಡೋನಿಗೆ ಒಂದು ಮಾತು"

ಬೆಳೆದ ಪೈರನ್ನು ಕತ್ತರಿಸುವಾಗ ಕಬ್ಬಿಣದ ಕತ್ತಿ ಒಂದು ಸಾಕು. ಯಾವುದೇ ಕೆಲಸವನ್ನು ಮಾಡುತ್ತೀನಿ ಎನ್ನುವ ಹುಮ್ಮಸ್ಸು ಇರುವವನಿಗೆ ಒಂದೇ ಒಂದು ಮಾತು ಸಾಕು. ಇದಕ್ಕೆ ಅನ್ವಯವಾಗುವ ಮಾತು : 'ಬುದ್ಧಿವಂತನಿಗೆ ಒಂದು ಮಾತು. ಮೆದು ಮಾತು ಲೇಸು. ಕತ್ತರಿಸಲು ನೂರು ಹತಾರಗಳಿಗಿಂತ ಒಂದೇ ಒಂದು ಅರಿತವಾದ ಆಯುಧ ಸಾಕು.'

"ಆಳಾಗಿ ದುಡಿ! ಅರಸನಾಗಿ ಉಣ್ಣು"

'ಕಾಯಕವೇ ಕೈಲಾಸ' ಎಂಬುದು ಬಸವಣ್ಣನವರ ಪ್ರಸಿದ್ಧವಾದ ಹೇಳಿಕೆ. ಮನುಷ್ಯನಿಗೆ ಕೆಲಸ ಬಹಳ ಮುಖ್ಯ. ಮನುಷ್ಯ ಯಾವುದೇ ಕೆಲಸವೇ ಆಗಲಿ ಸೇವಕನಾಗಿ ಕೂಲಿ ಆಳಾಗಿ ದುಡಿದು, ಆ ದುಡಿತದಿಂದ ಬಂದಂತಹ ಪ್ರತಿಫಲವನ್ನು ಮಹಾರಾಜನ ರೀತಿ ರಾಜವೈಭೋಗದಿಂದ ಅನುಭವಿಸುವಂತೆ ಸೂಚನೆ ನೀಡುತ್ತದೆ. ಒಳ್ಳೆಯ ಮೆದುಮಾತು ಸಾಕು. ಕಷ್ಟ ಪಟ್ಟು ದುಡಿದರೆ ಮಹಾರಾಜರ ೀತಿ ಮೃಷ್ಟಾನ್ನವನ್ನು ಊಟ ಮಾಡಬಹುದು ಎನ್ನುವ ಚೆನ್ನುಡಿಗಳು ಎಷ್ಟು ಚಂದ. ಜನಪದರ ಇಂತಹ ವೇದ ವಾಕ್ಯಗಳು ಗಾದೆ ಮಾತುಗಳು.

'ಗಾದೆ ವೇದಕ್ಕೆ ಸಮಾನ', 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' 'ಗಾದೆ ವೇದಕ್ಕೆ ತಲೆದಿಂಬು' ಮುಂತಾದವು ಗಾದೆಗಳನ್ನು ಕುರಿತ ಗಾದೆಗಳು. ಗಾದೆ ವೇದಕ್ಕೆ ಸಮಾನ ಎಂದು ಘೋಷಿಸಿರುವುದು ಸಮಾಜದಲ್ಲಿ ಗಾದೆಗಿರುವ ಸ್ಥಾನಮಾನಕ್ಕೆ ಕೊಟ್ಟ ಪ್ರಶಸ್ತಿಯಾಗಿದೆ. ಅಂತಹ ಗಾದೆಗಳು ಭಾಷೆಯ ನಾಡಿ ಮಿಡಿತಗಳು.

"ಅನ್ನ ಹಾಕಿದ ಮನೆ ಕೆಡಲ್ಲ
ಗೊಬ್ಬರ ಹಾಕಿದ ಹೊಲ ಕೆಡಲ್ಲ"

ದಾನ-ದಾನಗಳಲ್ಲಿ ಶ್ರೇಷ್ಠ ದಾನ ಅನ್ನದಾನ. ಗೃಹಸ್ಥನ ಕರ್ತವ್ಯ ಮನೆಗೆ ಬಂದವರಿಗೆ ಮತ್ತು ಜನ ಸಾಮಾನ್ಯರಿಗೆ ಅನ್ನ ಸತ್ಕಾರ್ಯವನ್ನು ಮಾಡಬೇಕು. ಇವತ್ತು ಅನ್ನ ಹಾಕಿದರೆ ಮುಂದಿನ ದಿನಗಳಲ್ಲಿ ಆ ಪ್ರತಿಫಲವನ್ನು ಪಡೆಯಬಹುದು. ಒಂದು ಕಾಲದಲ್ಲಿ ಶ್ರೀಮಂತಿಕೆಯಿಂದ ಸರ್ವರಿಗೂ ದಾನ ಮಾಡಿದ ಮನೆ ಮುಂದೆ ಒಂದು ದಿನ ಐಶ್ವರ್ಯ ಕಳೆದುಕೊಂಡಾಗ ಆ ಮನೆಯವರಿಗೆ ಸಹಾಯ ಮಾಡುತ್ತಾರೆ. ಆ ಮನೆಯು ಅಭಿವೃದ್ಧಿಯನ್ನು ಸಾಧಿಸುತ್ತದೆ. ಹಾಗೆಯೇ ಹೊಲಕ್ಕೆ ಗೊಬ್ಬರ ಹಾಕಿದರೆ ಒಂದಲ್ಲ ಒಂದು ಸಮೃದ್ಧಿಯಾದ ಬೆಳೆಯನ್ನು ಕೊಡುತ್ತದೆ. ಈ ಗಾದೆಯು ಮುಂದಿನ

ಭವಿಷ್ಯವನ್ನು ಸುಭಿಕ್ಷವನ್ನು ತಿಳಿಸುತ್ತದೆ. ಹೀಗೆ ಗಾದೆಗಳು ಮಾನವನ ಸ್ವಭಾವಗಳಿಗೆ ವೇದ ವಾಕ್ಯದ ಕೆಲಸ ಮಾಡುತ್ತವೆ. ಇನ್ನೂ ಒಂದು ಹೆಜ್ಜೆ ಮುಂದುವರಿದು ಪ್ರಜ್ಞಾವಂತ ಜನತೆ ಗಾದೆಯ ಮರ್ಮವನ್ನರಿತವನು ವೇದದ ಮರ್ಮವನ್ನರಿತವನು' ಎಂದಿದೆ. ವೇದ ಗಾದೆಗಿಂತ ಕೀಳು ಕನಿಷ್ಠವೆಂದು ಭಾವಿಸಬಾರದು. ಗಾದೆ ಮತ್ತು ವೇದಗಳಿಗಿರುವ ಅಂತರವನ್ನು ಒಂದು ಸೊಗಸಾದ ಉಪಮಾನದ ಮುಖಾಂತರ ಸ್ಪಷ್ಟಪಡಿಸಬಹುದು. ವೇದ ಅರಮನೆ ಗುರುಮನೆಗಳಲ್ಲಿ ಅಪರೂಪಕ್ಕೆ ಬಳಸುವಂಥ ಜರತಾರಿ ಶಾಲಿನಂತೆ. ಗಾದೆ ಪ್ರತಿಯೊಬ್ಬರೂ ದಿನನಿತ್ಯ ಅನಿವಾರ್ಯವಾಗಿ ಬಳಸುವ ವಲ್ಲೀಬಟ್ಟೆ(ಟವೆಲ್ಲ)ಯಂತೆ. ವಲ್ಲಿಯನ್ನು ಬಳಸುವವರು ಶಾಲನ್ನು ಬಳಸುವುದಿಲ್ಲ. ಶಾಲಿನ ಸ್ಥಾನವನ್ನು ವಲ್ಲಿಯೂ ತುಂಬಲಾರದು. ಇವೆರಡರಲ್ಲಿ ಒಂದು ಮೇಲು ಮತ್ತೊಂದು ಕೀಳು ಎನ್ನುವಂತಿಲ್ಲ. ಅದರದರ ಬಳಕೆ, ಸ್ಥಾನಮಾನ ಅದದಕ್ಕೆ ಇರುತ್ತದೆ. ಸಂದರ್ಭೋಚಿತವಾಗಿ ಇವೆರಡೂ ಬಳಕೆಗೊಳ್ಳುತ್ತವೆ. ಆದರೆ ಒಂದಂಶ ಮಾತ್ರ ಸ್ಪಷ್ಟ. ಶಾಲು ಜೀವನದ ಅತ್ಯಾವಶ್ಯಕ ವಸ್ತ್ರವೇನಲ್ಲ. ಅದಿಲ್ಲದೆಯೂ ಬಾಳಬಹುದು. ಆದರೆ ವಲ್ಲಿಯಬಟ್ಟೆ ಎಲ್ಲರಿಗೂ ಒಂದಿಲ್ಲೊಂದು ಕಾರಣಕ್ಕಾಗಿ ಅನಿವಾರ್ಯ. ಹೀಗೆ ಗಾದೆ ಮತ್ತು ವೇದ ಸಂಬಂಧವನ್ನು ಸ್ಪಷ್ಟಪಡಿಸಬಹುದು.

ಗಾದೆ ಭಾಷೆಯ ಮೂಲವನ್ನು ತಿಳಿಯಲು ಜೀವನಾಡಿ. ಭಾಷೆಯ ಪ್ರಾಚೀನತೆಯನ್ನು ಆ ಭಾಷೆಯ ಹಿಡಿನುಡಿಗಳು, ನುಡಿಗಟ್ಟುಗಳು, ಜೋಡಿ ನುಡಿಗಳಿಂದ ತಿಳಿಯಬಹುದು. ಗಾದೆಗಳು ಭಾಷೆಯ ಜೀವಂತ ಕುರುಹುಗಳಾಗಿವೆ. ಇಂತಹ ಗಾದೆಗಳು ಜನಪದರ ಬಾಯಿಂದ ಬಾಯಿಗೆ ಬಂದಂತಹ ನಾಣ್ಣುಡಿಗಳು. ಗಾದೆಗಳ ರಚನೆಯು ಅನಾಮಧೇಯ ಕರ್ತೃವಿನಿಂದ ಆಗಿದೆ.

ಯಾವುದೇ ಒಂದು ಕೆಲಸಕ್ಕೆ ನಿರ್ದಿಷ್ಟ ಗುರಿ ಎಂಬುದು ಇರುತ್ತದೆ. ಹಿಂದೆ ಗುರು ಇರಲು ಮುಂದೆ ಗುರಿಯಿರಲು ಸಾಧನೆಯ ಹಾದಿ ಸುಲಭ. ಸಾಹಿತ್ಯದ ಮೌಲ್ಯಗಳು ಅಮೂಲ್ಯ ರತ್ನಗಳು. ಅಂತಹ ಸಾಹಿತ್ಯದ ಮೌಲ್ಯಗಳ ಸಾಲಿನಲ್ಲಿ ಸರಿಸಮಾನವಾದ ಸ್ಥಾನವನ್ನು ಗಳಿಸಿಕೊಂಡಿರುವ ಗಾದೆಗಳ ಸಂದರ್ಭ ಮತ್ತು ಮೌಲ್ಯಗಳನ್ನು ತಿಳಿಸುವುದು ಈ ಸಂಪ್ರಬಂಧದ ಉದ್ದೇಶವಾಗಿದೆ.

ಸಂಪ್ರಬಂಧದ ವಿಷಯವು "ದೊಡ್ಡಮುರ ಗ್ರಾಮದ ಗಾದೆಗಳ ಸಂದರ್ಭ ಮತ್ತು ಮೌಲ್ಯ". ಇಲ್ಲಿನ ಮೂಲ ಉದ್ದೇಶ ಗಾದೆಗಳು ದೊಡ್ಡಮುರ ಗ್ರಾಮದಲ್ಲ ಯಾವ ಸಂದರ್ಭದಲ್ಲಿ ಬಳಸುತ್ತಾರೆಂದು ತಿಳಿಸುವುದಾಗಿದೆ. ಸಂದರ್ಭದ ಅರಿವಿಲ್ಲದೆ ಗಾದೆಯ ಮೌಲ್ಯ ನಿರ್ಧಾರ ಮಾಡಲು ಸಾಧ್ಯವಿಲ್ಲ. ಹೀಗಾಗಿ ಗಾದೆಗಳ ಸಂದರ್ಭವನ್ನು

ನಿರೂಪಿಸುವುದು ಅವುಗಳ ವಿಶ್ಲೇಷಣೆಯ ಬಹುಮುಖ್ಯ ಅಂಶ ಎನ್ನಬಹುದು. ದರ ಜೊತೆಗೆ ಮತ್ತು ಗಾದೆಗಳ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳನ್ನು ಹೇಳುವುದು ಈ ಸಂಪ್ರಬಂಧದ ಉದ್ದೇಶವಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಈ ಸಂಪ್ರಬಂಧವನ್ನು ಆರು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆ ಅಧ್ಯಾಯ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಎರಡನೆಯ ಅಧ್ಯಾಯವು ಗಾದೆಗಳ ಉಗಮ ವಿಕಾಸವನ್ನು, ಮೂರನೆಯ ಅಧ್ಯಾಯವು ದೊಡ್ಡಮರ ಗ್ರಾಮದ ಕಿರು ಪರಿಚಯವನ್ನು, ನಾಲ್ಕನೆಯ ಅಧ್ಯಾಯವು ಗಾದೆಗಳ ಸಂದರ್ಭವನ್ನು, ಐದನೆಯ ಅಧ್ಯಾಯವು ಗಾದೆಗಳ ಮೌಲ್ಯವನ್ನು ಒಳಗೊಂಡಿವೆ. ಒಟ್ಟಿನಲ್ಲಿ ಗಾದೆಗಳ ಸಾಮಾಜಿಕ ಮೌಲ್ಯಗಳಲ್ಲಿ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳ ಒಳ ಅರಿವುಗಳಾಗಿವೆ. ಈ ಸಂಪ್ರಬಂಧದಲ್ಲಿ ಗಾದೆಗಳ ಸಂದರ್ಭದ ವಿಶ್ಲೇಷಣೆಗಾಗಿ ಸುಮಾರು ನೂರು ಗಾದೆಗಳನ್ನು ಆಯ್ದುಕೊಳ್ಳಲಾಗಿದೆ.

## ಅಧ್ಯಾಯ ೨

# ಗಾದೆಗಳ ಉಗಮ ವಿಕಾಸ ಮತ್ತು ಪ್ರಯೋಜನ

'ಗಾದೆಗಳು' ಜೀವನಾನುಭವದ ಪಡಿಯಚ್ಚುಗಳು. ಗಾದೆಗಳು ವೇದಕ್ಕೆ ಸಮನಾದ ರುಜುನುಡಿಗಳು. ಇಂತಹ ಗಾದೆಗಳು ಒಂದು ಭಾಷೆಯ ಮೂಲ ಆಧಾರಗಳಾಗಿವೆ. ಒಂದು ಭಾಷೆಯ ಶ್ರೀಮಂತಿಕೆಯನ್ನು ಗಾದೆಗಳು ಹೆಚ್ಚಿಸುತ್ತವೆ. ಜನಪದರು ಗಾದೆಗಳ ಮೂಲ ಸೊಗಡಿನ ರುವಾರಿಗಳು. ಪ್ರತಿಯೊಬ್ಬ ಅನುಭಾವಿ ವ್ಯಕ್ತಿಯು ಗಾದೆಗಳನ್ನು ತನ್ನ ಮಾತಿನಲ್ಲಿ ಬಳಸುತ್ತಾನೆ. ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿರುವುದನ್ನು ಮನಗಾಣಬಹುದು. ಗಾದೆಗಳು ಮಾತಿಗೆ ಗಟ್ಟಿತನವನ್ನು ಸಮರ್ಥವಾಗಿ ಒದಗಿಸುತ್ತದೆ.

"ಸಾರ ಬಲ್ಲವ ಸರ್ವಜ್ಞ", "ಸುಭಾಷಿತವಿಲ್ಲದವ ಸಭಾನಾಯಕನಾದರೇನು", "ಯಾರಿಗೆ ಯಾರಿಲ್ಲ ದಾರಿಗೆ ಸುಂಕವಿಲ್ಲ", "ನಾಮವಿಲ್ಲದ ಅರಸನಿಗೆ ನೇಮವಿಲ್ಲದ ಪ್ರಧಾನಿ", "ಕದ್ದು ಮದುವೆಯಾಗ್ತೀನಿ ಬಗ್ಗಿ ವಾಲಗ ಊದು", "ಎದೆಗಾರ ಗೊಣಗಲ್ಲ ಆಯ್ಗಾರ ಮುಣುಗಲ್ಲ" "ಎರೆಹೊಲ ಲೇಸು, ಕರೆ ಹೆಂಡ್ರು ಲೇಸು" ಈ ಮೊದಲಾದ ಗಾದೆಗಳು ಜೀವನ ಸತ್ಯ, ಮಾನವ ಸ್ವಭಾವ ನೀತಿಪಾಠಗಳನ್ನು ಪ್ರತ್ಯಕ್ಷವಾಗಿ ಪ್ರಾಮಾಣೀಕರಿಸುತ್ತವೆ. ಮಾನವ ಹುಟ್ಟಿನಿಂದಲೇ ಗಾದೆಗಳ ಉಗಮವಾಯಿತು ಎಂಬುವುದಕ್ಕೆ ಸಾಕ್ಷಿಯಾಗಿವೆ.

ಗಾದೆ, ನಾಣ್ಣುಡಿ, ನಾಡನುಡಿ, ಸಾಮತಿ, ಇವು 'Proverb' ಆಂಗ್ಲ ಶಬ್ದಕ್ಕೆ ಸಮಾನಾರ್ಥಕವಾಗಿ ಬಳಕೆಯಾಗುವ ಕನ್ನಡ ಪದಗಳಾಗಿವೆ. 'ಸಂಸ್ಕೃತ'ದಲ್ಲಿ 'ಸುಭಾಷಿತ' ಎಂದರೆ ಒಳ್ಳೆಯದಾಗಿ ಹೇಳಿದ ಮಾತು, ನೀತಿವಚನ. 'ಪ್ರಾಕೃತ'ದಲ್ಲಿ ಗಾಹೆ ಎಂದರೆ ಗತಿಬದ್ಧನುಡಿ, ಹಾಡು. 'ಅರಬಿ'ಯಲ್ಲಿ 'ಮತಲ್', ಉಪಮೆ, ದೃಷ್ಟಾಂತ ಕತೆ, 'ಚೀಣೀ'ಯಲ್ಲಿ 'ಯೆನ್', ಮನೋಹರವಾದ ಮಾತು, 'ಗ್ರೀಕ್'ನಲ್ಲಿ 'ಪರೋಮಿಯ', ಬೀದಿಯಲ್ಲಿ ಕೇಳಿದ ಮಾತು. ಹೀಗೆ ನಾನಾ ಭಾಷೆಗಳಲ್ಲಿ ನಾನಾ ವಿಧದಲ್ಲಿ ಬಳಸುತ್ತಾರೆ. ವಿವಿಧ ಭಾಷೆಗಳು, ವಿವಿಧ ರೀತಿಯ ಜನಜೀವನವಿರುವಂತೆ ಗಾದೆಗಳು ವೈವಿಧ್ಯವನ್ನೊಳಗೊಂಡಿದೆ. ಜನಪದರ ಪ್ರಾಚೀನ ಹೇಳಿಕೆಗಳಿಗೆ 'ಗಾದೆ' ಎಂದು ಕರೆಯುವುದು ವಾಡಿಕೆಯಾಗಿದೆ. ಗಾದೆಗೆ ಸಂವಾದಿಯಾಗಿ ಇನ್ನೂ ಅನೇಕ ಮಾತುಗಳನ್ನು ಬಳಸುವುದುಂಟು. ಲೋಕೋಕ್ತಿ, ಪ್ರಾಚೀನೋಕ್ತಿ, ಸಾಮತಿ, ಸಾರೋಕ್ತಿ, ಸೂಕ್ತಿ ಸೂತ್ರ, ಉದ್ದರಣೆ, ಹೇಳಿಕೆ, ವಿಧಿ, ನಿಯಮ, ಪ್ರಮಾಣ ಇತ್ಯಾದಿ.

ಗಾದೆಯನ್ನು ಕುರಿತು ವಿವಿಧ ವಿದ್ವಾಂಸರು ತಮ್ಮದೇ ಆದ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಗಾದೆಗಳನ್ನು ಏಕಸೂತ್ರದಲ್ಲಿ ಹಿಡಿದಿಡಲು ಸಾಧ್ಯವಾಗುವುದಿಲ್ಲ. ಒಂದು ವಿಷಯವನ್ನು ಹೇಳಲು ಹೊರಟರೆ ಅದರಿಂದ ಹೊರತಾಗಿ ಹೆಚ್ಚಿನ ವಿಷಯಗಳನ್ನು ಗಾದೆಗಳು ಸೂಚಿಸುತ್ತವೆ.

"ಜೆ.ಎ.ಕೆಲ್ಲೊ ಅವರು 'ಗಾದೆಯ ನಾಲ್ಕು ಗುಣಗಳನ್ನು ಹೆಸರಿಸುತ್ತಾರೆ. ಸಂಕ್ಷಿಪ್ತತೆ, ವಿವೇಕಪೂರ್ಣತೆ ಅಥವಾ ಸಂವೇದನಾಶೀಲತೆ, ತೀಕ್ಷ್ಣತೆ ಮತ್ತು ಜನಪ್ರಿಯತೆ'.

'ಸರ್ವೇಸಾಮಾನ್ಯವಾದ ಮತ್ತು ಗಮನಾರ್ಹವಾದ ಉಪಯೋಗದಲ್ಲಿನ ಅಡಕವೂ ಸಾರಭೂತವೂ ಆದ ಮಾತು ಅಥವಾ ಹೆಚ್ಚು ವಿಷಯಗಳನ್ನು ಕೆಲವೇ ಮಾತುಗಳಲ್ಲಿ ಭಟ್ಟಿ ಇಳಿಸಿದುದು' ಎಂದು ಥಾಮಸ್ ಪುಲ್ಲರನ ಅಭಿಪ್ರಾಯ.

'ಲಾರ್ಡ್‌ಜಾನ್ ರಸೆಲ್' ಹೇಳುವಂತೆ 'ಇದು ಹಲವರ ಜ್ಞಾನ ಒಬ್ಬನ ವಿವೇಕ'.

ಇಸೆಲಿಯಸ್ ಎಂಬ ಜರ್ಮನ್ ಗಾದೆಗಳ ಸಂಗ್ರಹಕಾರನ ಪ್ರಕಾರ 'ಗಾದೆಗಳೆಂದರೆ ಜನಸಾಮಾನ್ಯರಲ್ಲಿ ಚಲಾವಣೆಯಲ್ಲಿರುವ ಸಾರ್ವಜನಿಕ ಮುದ್ರೆ ಬಿದ್ದಿರುವ, ಪ್ರಚಲಿತವೂ ಸ್ವೀಕೃತ ಮೌಲ್ಯಭರಿತವೂ ಆಗಿರುವ ನಾಣ್ಯ. ಇದನ್ನು ಇನ್ನೂ ಸಂಕ್ಷಿಪ್ತವಾಗಿ ಹೇಳುವುದಾದರೆ, ಜನತೆಯ ಕೌಟುಂಬಿಕ ಪದವೇ ಗಾದೆಯೆನಿಸಿ–ಕೊಳ್ಳುತ್ತದೆ. 'ನಿಜವಾದ ಗಾದೆ ರಾಷ್ಟ್ರೀಯ ಗುಣದ ಮಣ್ಣಿನಲ್ಲಿ ಬೆಳೆದ ಸಹಜ ಬೆಳೆ. 'ಎಸ್.ಜಿ.ಚಾಂಪಿಯನ್' ಅವರು ತಮ್ಮ ಬೃಹತ್ ಸಂಗ್ರಹಕ್ಕೆ ಮುನ್ನುಡಿ ಬರೆಯುತ್ತಾ 'ಗಾದೆಯೆಂದರೆ ಜನಬಳಕೆಯಲ್ಲಿದ್ದು ಈಗಲೂ ಇರುವ ಉಪದೇಶಾತ್ಮಕ ಅಥವಾ ಸಲಹೆಯನ್ನು ನೀಡುವ ನಿಜವಾದ ಅರ್ಥವನ್ನು ಮರೆಸಿ ಅಲಂಕಾರಿಕವಾಗಿ ವ್ಯಕ್ತವಾಗರುವ ರೂಪಕ ಅಥವಾ ಗೂಢಾರ್ಥದ್ಯೋತಕವಾಗಿ ರೂಪ ಬದಲಿಸಿ ಕಾಣಿಸಿಕೊಳ್ಳುವ ಜನಾಂಗವೊಂದರ ಸೂಕ್ತಿಯೇ ಆಗಿವೆ'. 'ಎ.ವಿ.ಕೋಸ್ಕಿಮಯಸ್' ಹೇಳುವ ಹಾಗೆ 'ಗಾದೆಯ ಪ್ರಧಾನ ಸರ್ವೋತ್ತಮ ವೈಶಿಷ್ಟ್ಯವೆಂದರೆ ಸಾರ್ವತ್ರಿಕ ಸ್ವೀಕಾರಾರ್ಹತೆ ಅಥವಾ ಭಾವನೆಗಳ ಮತ್ತು ಆದರ್ಶಗಳ ಪ್ರಕಾಶನ ಮತ್ತು ಪ್ರತಿಫಲನಗುಣ, ರಾಷ್ಟ್ರದ ದೈಹಿಕ ಹಾಗೂ ಮಾನಸಿಕ ಚಕ್ಷುವಿಗೆ ಸುವ್ಯಕ್ತವಾಗಿರುವ ಗೋಚರಾಗೋಚರ ಜಗತ್ತಿನ ಸುತ್ತಲಿನ ಎಲ್ಲ ವಿಷಯಗಳನ್ನು ಅರಿತ ಅಭಿಪ್ರಾಯಗಳು ಮತ್ತು ಪರಿಶೀಲನೆಗಳು ಅನುಮತಿಗಳು ಮತ್ತು ಅಂದಾಜುಗಳು'. 'ಗಾದೆಯೆಂದರೆ ಕೇಂದ್ರೀಕೃತ ಸಂಕೇತಗಳ ನಾಯಕ ಕೃತಿ, ಆಯ್ದ ಮತ್ತು ಅತ್ಯುತ್ತಮ ನಾಜೂಕಿನ ನಾಟು

ನುಡಿ ಕವಿತೆ' 'ಗಾದೆ ಮಾತುಗಳೆಂದರೆ ಅಚ್ಚುಕಟ್ಟಾದ ನಿರ್ಣಯಗಳಲ್ಲ, ವಿವೇಕ ಜಾಗೃತಿ ಮಾಡುವ ಸುಭಾಷಿತಗಳು'.

'ಗಾದೆಗಳು ಹೊಸ ಸುಭಾಷಿತಗಳ ಮಸೆಗಲ್ಲು, ವಿವೇಕದ ಬರೆಗಲ್ಲು'.

'ಗಾದೆಯೆಂದರೆ ಸತ್ಯವಿರಬಹುದಾದುದನ್ನು ಅಥವಾ ನೀತಿ ಬೋಧೆಯನ್ನು ವ್ಯಕ್ತಪಡಿಸುವ ವಾಡಿಕೆಯ ಚಿಕ್ಕ ವಾಕ್ಯಗಳು'.[೧]

ಹೀಗೆ ಗಾದೆಗಳನ್ನು ಯಾವುದೋ ಒಂದು ವ್ಯಾಖ್ಯೆಯಲ್ಲಿ ಬಂಧಿಸಿಡಲು ಸಾಧ್ಯವಿಲ್ಲ. ಗಾದೆ ಒಂದು ವ್ಯಾಖ್ಯೆಯನ್ನು ಮೀರಿ ತನ್ನದೇ ಆದ ವೈಶಿಷ್ಟ್ಯವನ್ನು ಒಳಗೊಂಡಿದೆ. ಗಾದೆಯ ವ್ಯಾಖ್ಯೆ ಅಥವಾ ವಿಷಯ ಸರ್ವವ್ಯಾಪಿಯಾಗಿದೆ. ಗಾದೆ ಅನುಭವ ಸಿದ್ಧವಾದ ಮಾತಾಗಿ, ಅನುಭವವೇ ಒರೆಗಲ್ಲಾಗಿ, ಸಾಕ್ಷಿಯಾಗ ನಿಲ್ಲುತ್ತದೆ. ಗಾದೆಗಳ ಸೂಕ್ತ ಸಂದರ್ಭದಲ್ಲಿ ತಾಳಿದ ಯೋಗ್ಯ ನಿರ್ಣಯಗಳಾಗಿವೆ. ಇವಕ್ಕೆ ಅನುಭವದ ಪರಮಿತಿ ಇರುವಂತೆ, ಅನುಭವ ಪ್ರೀತಿಯು ಇರುತ್ತದೆ. ಒಂದು ಕಡೆ ಮಾನವನ ಬುದ್ಧಿಮತ್ತಿಕೆಗಳಾಗಿವೆ. ಮತ್ತೊಂದು ಕಡೆ ಮಾನವನ ಆಲೋಚನಾ ದೀಪಿಕೆಗಳಾಗಿವೆ. ಮಾನವನ ಬದುಕು ಬೇವು–ಬೆಲ್ಲ, ಸಿಹಿ–ಕಹಿ, ನೋವು–ನಲಿವುಗಳ ಸರಮಾಲೆ. ಗಾದೆಗಳು ಇಂತಹ ಬಾಳಿನ ಅಭಿವ್ಯಕ್ತಿಗಳಾಗಿವೆ.

ಗಾದೆಯ ಉಗಮಕ್ಕೆ ಕಾರಣ ಹೇಳುವುದು ಕಷ್ಟ ಸಾಧ್ಯ. ಗಾದೆ ಯಾವ ಸಮಾಜದಲ್ಲಿ, ಯಾವ ಕಾಲದಲ್ಲಿ ಯಾವ ರೀತಿ ಉಗಮವಾಯಿತು ಎಂದು ಹೇಳುವುದು ಸುಲಭವಲ್ಲ. ಪ್ರಾಚೀನ ಮಾನವರು ತನ್ನ ಸುಖದುಃಖಗಳನ್ನು, ಕಷ್ಟಕಾರ್ಪಣ್ಯಗಳನ್ನು ಅಭಿವ್ಯಕ್ತಿಸಲು, ತನ್ನ ಅನುಭವಗಳನ್ನು ವ್ಯಕ್ತಪಡಿಸಲು ಗೀತೆ, ಕಥನಗೀತೆ, ಕಥೆ ಗಾದೆಗಳನ್ನು ಉಪಯೋಗಿಸಿಕೊಂಡರು. ಮೌಲ್ಯಯುತವಾದ ಪ್ರತಿಭಾಶಕ್ತಿ, ಕಲ್ಪನೆಯ ಆಸಕ್ತಿಯಿಂದ ಮನುಷ್ಯ ಗಾದೆಗಳನ್ನು ಸೃಷ್ಟಿಸಿದನು ಎಂಬುವುದಕ್ಕೆ ಸಂದೇಹವಿಲ್ಲ. ಗಾದೆ ಎಷ್ಟು ಪ್ರಾಚೀನ ಕಾಲದಲ್ಲಿ ಸೃಷ್ಟಿಯಾಯಿತು ಎಂಬುದು ಹೇಳುವುದು ಕಷ್ಟ.

ಗಾದೆಗಳ ಉಗಮದ ಬಗ್ಗೆ ವಿವೇಚನೆ ಮಾಡುವಾಗ ಜಾನಪದ ಅಂಶಗಳಿಗೆ ಅನ್ವಯವಾಗುವ ಸಿದ್ಧಾಂತ ಮತ್ತು ವಿಧಾನಗಳ ಮೂಲಕ ಹೇಳುವುದು ಇನ್ನೊಂದು ವಿಧಾನಗೀತೆ, ಕಥನಗೀತೆ ಮುಂತಾದವುಗಳಿಗೆ ಅನ್ವಯವಾಗುವ ಸಿದ್ಧಾಂತಗಳನ್ನು ಗಾದೆಗಳ ಉಗಮಕ್ಕೂ ಅನ್ವಯಿಲಾಗಿದೆ. ಗಾದೆಯ ಉಗಮಕ್ಕೆ ಅನ್ವಯವಾಗುವ

೧. ರಾಗೌ, ಜನಪದ ಸಾಹಿತ್ಯ ರೂಪಗಳು, ಪು. ೨೪–೨೫.

ಮೂರು ಸಿದ್ಧಾಂತಗಳನ್ನು ಗುರುತಿಸಬಹುದು. ಮಾನಸಿಕವಾಗಿ ಗಾದೆ ಹೇಗೆ ಉಗಮವಾಯಿತು ಎಂದು ಚಿಂತನೆ ಮಾಡುವುದು ಮೊದಲನೆಯ ಹಂತ. ಐತಿಹಾಸಿಕವಾಗಿ ಎಷ್ಟು ಪ್ರಾಚೀನವಾದುದು ಎಂದು ಪರಿಶೀಲನೆ ಮಾಡುವುದು ಎರಡನೆಯದು. ಭೌಗೋಳಿಕವಾಗಿ ಆ ಅಂಶ ಎಲ್ಲ ಉಗಮವಾಯಿತು, ಹೇಗೆ ವಿಕಾಸಹೊಂದಿತು ಎಂದು ಪರಿಶೀಲನೆ ಮಾಡುವುದು ಮೂರನೆಯದು.

ಗಾದೆ ಯಾವ ಕಾಲದಲ್ಲಿ ಹುಟ್ಟಿತು ಎಂಬುದನ್ನು ಸಂಶೋಧನೆ ಮಾಡಿದರೆ ಅದು ಚಾರಿತ್ರಿಕ ಅಧ್ಯಯನವಾಗುತ್ತದೆ. ಉದಾಹರಣೆಗೆ 'ಕೃಷ್ಣರಾಯ ಭೂಪ ಮನೆಮನೆಗೆ ದೀಪ', 'ಬುಕ್ಕರಾಯ ಮೆಚ್ಚಿ ಬೆಕ್ಕಿನ ಮರಿ' ಇತ್ತ' ಮುಂತಾದವು ವಿಜಯನಗರ ಕಾಲಕ್ಕೆ ಅದರ ನಂತರದ ಕಾಲಕ್ಕೆ ಸಂಬಂಧಿಸಿದ್ದವು ಎಂದು ಊಹಿಸಬಹುದು.

ಕೆಲವು ಗಾದೆಗಳ ಕಥೆಗಳು ಆಧಾರದಿಂದ ಹುಟ್ಟಿದವು. ಗಾದೆಗಳು ಕಥೆಗಳ ಬಾಲದಂತೆ ಹುಟ್ಟಿಕೊಳ್ಳುತ್ತವೆ. ಕಥೆಗಳ ಅರ್ಥ ಮತ್ತು ನೀತಿಗಳು ಒಂದೇ ವಾಕ್ಯದಲ್ಲಿ ಅಡಕವಾಗಿರುತ್ತವೆ. ಪುರಾಣ ಇತಿಹಾಸಗಳು ಕೆಲವು ಗಾದೆಗಳ ಉಗಮಕ್ಕೆ ಕಾರಣವಾದುವು. ಬೈಬಲು, ಮಹಾಭಾರತ, ರಾಮಾಯಣ, ಇಲಿಯಡ್, ಒಡಿಸ್ಸಿ ಮುಂತಾದವು ಗಾದೆಗಳ ಉಗಮಕ್ಕೆ ಕಾರಣವಾದುವು.

ಉದಾಹರಣೆ: 'ಮಣ್ಣಿನಿಂದ ಕೌರವ ಕೆಟ್ಟ, ಹೆಣ್ಣಿನಿಂದ ರಾವಣ ಕೆಟ್ಟ', 'ಭೀಮನಿರುವ ಸ್ವರ್ಗ ಬೇಡ, ರಂಗನಿರುವ ವಟಾರ ಬೇಡ', 'ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲ', 'ಅಳಿಲಭಕ್ತಿ, ಮಳಲಸೇವೆ', 'ಅಂಕೆಯಿಲ್ಲದ ಕಪಿ ಲಂಕೆ ಸುಟ್ಟಿತು', 'ಉತ್ತರನ ಪೌರುಷ ಒಲೆಯ ಮುಂದೆ', 'ಪಕ್ಷ ಪಾಂಡವರಲ್ಲಿ ಊಟ ಕೌರವರಲ್ಲಿ', ಬೈಬಲ್ಲಿನ ಆಧಾರದಿಂದ ಹುಟ್ಟಿದ ಗಾದೆ 'ದೇವರು ಹೆಣ್ಣನ್ನು ಮನುಷ್ಯರ ತಲೆಯ ಭಾಗದಿಂದ ಸೃಷ್ಟಿಸಲಿಲ್ಲ; ಕಾರಣ, ಅವಳು ಅವನನ್ನು ಆಳದಿರಲಿ ಎಂದು ಅವನ ಕಾಲಿನಿಂದಲೂ ಸೃಷ್ಟಿಸಲಿಲ್ಲ; ಕಾರಣ, ಅವಳು ಅವನ ಸೇವಕಿಯಾಗದಿರಲಿ ಎಂದು ಅವಳನ್ನು ಅವನ ಪಕ್ಕೆಯಿಂದ ಸೃಷ್ಟಿಸಿದ ಹೃದಯ ಹತ್ತಿರ ಇರಲೆಂದು' ಮುಂತಾದವು.

ಸ್ಥಳಪುರಾಣ, ಸ್ಥಳ ಮಹಾತ್ಮ್ಯಗಳು ಒಂದು ದೇಶದ ಚರಿತ್ರೆಯನ್ನು ತಿಳಿಸುತ್ತವೆ ಮತ್ತು ಗಾದೆಗಳ ರಚನೆಗೂ ಕಾರಣವಾಗುತ್ತವೆ.

'ನೇಪಲ್ಸ ನಗರವನ್ನು ನೋಡಿ ಮಡಿ' ಒಂದು ಕಾಲಕ್ಕೆ ನೇಪಲ್ಸ ಕಲೆಕಸುಬುಗಳಿಗೂ ವ್ಯಾಪಾರಕ್ಕೂ ಹೆಸರುವಾಸಿಯಾಗಿದ್ದ ಪಟ್ಟಣವಾಗಿತ್ತು. ಯೂರೋಪಿನ ಸುಂದರನಗರಗಳಲ್ಲಿ ಒಂದಾಗಿತ್ತು.

'ಎಲ್ಲ ರಸ್ತೆಗಳೂ ರೋಮಿಗೇ ಕರೆದೊಯ್ಯುತ್ತವೆ'

ರಸ್ತೆ ನಿರ್ಮಾಣದಲ್ಲಿ ರೋಮಿನವರು ಬಹುನಿಪುಣರು. ರೋಮ್ ಚಕ್ರಾಧಿಪತ್ಯದಲ್ಲಿ ತಮ್ಮ ರಾಜಧಾನಿಗೆ ರಾಜ್ಯದ ಮೂಲೆಮೂಲೆಯಿಂದಲೂ ರಸ್ತೆಗಳನ್ನು ಹೆಣೆದಿದ್ದರು.

'ಫ್ರಾನ್ಸ್ ದೇಶದವರು ಹಸಿವಾದರೆ ಕಾಗೆಯನ್ನು ಬಿಡರು' ಇದು ರಷ್ಯನರಲ್ಲಿ ರೂಢಿಯಲ್ಲಿರುವ ಗಾದೆಯಾಗಿದೆ. ನೆಪೋಲಿಯನ್ ರಷ್ಯಾದ ಮೇಲೆ ದಾಳಿಮಾಡಿದಾಗ ಫ್ರೆಂಚು ಸೈನಿಕರು ಹಸಿವು ತಾಳಲಾರದೆ ಕಾಗೆಗಳನ್ನು ಕೊಂದು ತಿನ್ನುತ್ತಿದ್ದರು ಎಂಬುದು ಪ್ರತೀತಿ.

'ಕೊಂಕಣ ಸುತ್ತಿಕೊಂಡು ಮೈಲಾರಕ್ಕೆ ಬಂದರು'

'ಹಂಪೆಗೆ ಹೋಗುವುದಕ್ಕಿಂತ ತನ್ನ ಕೊಂಪೆಯೇ ವಾಸಿ'

ಪ್ರತಿಯೊಂದು ದೇಶ, ಸ್ಥಳ, ಬೆಟ್ಟ, ಗುಡ್ಡ ಮುಂತಾದವು ಗಾದೆಗಳಲ್ಲಿ ಇಣಿಕಿನೋಡಿ ಅವುಗಳ ಪ್ರಸಿದ್ಧಿಯ ಜೊತೆಗೆ ಒಂದು ಭಾಷೆಯ ಶ್ರೀಮಂತಿಕೆಗೆ ಕಾರಣವಾಯಿತು.

ದಿನನಿತ್ಯದ ಜೀವನದಲ್ಲಿ ನಾವು ಕಂಡು ಕೇಳಿದವು, ಅನುಭವಿಸಿದವು ಗಾದೆಗಳಾಗಿ ರೂಪಗೊಳ್ಳುತ್ತವೆ. ಗಾದೆಗಳಲ್ಲಿ ಅನುಭವದ ದಟ್ಟವಾದ ಸಾರವಿದ್ದರೂ ಹಾಸ್ಯಮಯ ಗಾದೆಗಳನ್ನು ನೋಡಬಹುದು.

''ಮಂಗಿ ಮಗನ್ನ ಹೆತ್ತು
ಊರಗೌಡನ ಹೆಸರು ಇಕ್ಕಿದ್ಲು''

''ಕುದುರೆ ಕಂಡ್ರೆ ಕಾಲುನೋವು
ತಾಯಿ ಕಂಡ್ರೆ ಕಾಲುನೋವು''

''ಹೊಳೆಯಲ್ಲಿ ಹುಣಸೇಹಣ್ಣು ತೊಳೆದ ಹಾಗೆ''

''ಬೆಣ್ಣೆಯಲ್ಲಿ ಕೂದ್ಲು ತೆಗೆದ ಹಾಗೆ ಮಾತನಾಡುತ್ತಿಯಾ''

''ತುಂಬಿದ ಕೊಡ ತುಳುಕುವುದಿಲ್ಲ''

''ಕರೆದು ಹೆಣ್ಣು ಕೊಟ್ರೆ ಮಲೆನಾಗ್ರು''

''ಅಟ್ಟು ಉಣ್ಣುವ ಮಕ್ಕಳಿಗೆ ಬೆರ್ಕೆಸೊಪ್ಪಿನ ಆಟ''

ಗಾದೆಗಳು ತುಂಬು ಜೀವನ ಅನುಭವದ ಆಧಾರದಿಂದ ಹುಟ್ಟಿದವು. ಯಾರೋ ಒಬ್ಬರ ಬಾಯಲ್ಲಿ ವಿವೇಕಪೂರ್ಣವಾದ ಬುದ್ಧಿಯಿಂದ ಹುಟ್ಟಿದವು ಗಾದೆಗಳು. 'ಹಲವರ ಜ್ಞಾನ ಒಬ್ಬನ ವಿವೇಕ' ಎಂಬ ಮಾತು ಗಾದೆಗಳ ಉಗಮಕ್ಕೆ ಕಾರಣವಾಯಿತು.

ಮನುಷ್ಯ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಅಲೆಮಾರಿಯಾಗಿ ಜೀವನ ಪ್ರಾರಂಭವಾಗುತ್ತದೆ. ಆ ಪ್ರದೇಶದ ಜನರ ಜೊತೆ ಸಂವಹನವಾಗುತ್ತದೆ. ಆ ಪ್ರದೇಶದ ಜನತ ಜೊತೆ ಭಾಷೆಯು ಮಾಧ್ಯಮವಾಗುತ್ತದೆ. ಒಂದು ಭಾಷೆಯು ಇನ್ನೊಂದು ಭಾಷೆಯಲ್ಲಿನ ಎಲ್ಲಾ ಸಾಹಿತ್ಯಿಕ ಅಂಶಗಳನ್ನು ಒಳ್ಳೆಯ ಅಂಶಗಳನ್ನು ಸ್ವೀಕರಿಸುತ್ತದೆ. ಅಂತೆಯೇ ಗಾದೆಗಳು ಒಂದು ಪ್ರದೇಶದಲ್ಲಿ ಹುಟ್ಟಿ ಬೇರೆ ಪ್ರದೇಶಗಳಿಗೆ ಪ್ರಯಾಣಮಾಡುತ್ತವೆ. ಮತ್ತೆ ಕೆಲವು ಗಾದೆಗಳು ಪ್ರಾದೇಶಿಕವಾಗಿ ಸ್ವತಂತ್ರವಾಗಿ ಹುಟ್ಟುತ್ತವೆ. ಹೀಗೆ ಗಾದೆಗಳು ಎರಡು ರೀತಿಯಲ್ಲಿ ವಿಕಾಸಗೊಂಡಿವೆ ಎಂದು ಹೇಳಬಹುದು. ಡಾ. ಚಾಂಪಿಯನ್ ಹೀಗೆ ಹೇಳುತ್ತಾರೆ. "ಗಾದೆಯ ಜ್ಞಾನ ಲೋಕದಲ್ಲೆಲ್ಲ ಒಂದೇ; ವಿಭಿನ್ನತೆ ಇರುವುದೆಲ್ಲ ಗಾದೆಗಳ ಅಭಿವ್ಯಕ್ತಿಯಲ್ಲಷ್ಟೆ. (ಇದಕ್ಕೆ ಕಾರಣ ಮನುಷ್ಯರೆಲ್ಲ ಒಂದೇ ಹಿಟ್ಟಿನಿಂದ ಮಾಡಲ್ಪಟ್ಟವರೆ. ಮೂಲಭೂತವಾಗಿ ಪೌರ್ವಾತ್ಯ ಪಾಶ್ಚಾತ್ಯರೆನ್ನದೆ, ಬಿಳಿ ಕರಿಯರೆನ್ನದೆ ಮಾನವಿಕವಾಗಿ ಅವರೆಲ್ಲ ಒಂದೇ ಆಗಿದ್ದಾರೆ. ಮೂಲಭೂತ ಪ್ರವೃತ್ತಿಗಳಾದ ಪ್ರೇಮ, ಹಸಿವು, ಭಯ ಮುಂತಾದವು ಅಸಂಸ್ಕೃತ ಸುಸಂಸ್ಕೃತರೆಂಬ ಭೇದವಿಲ್ಲದೆ ಎಲ್ಲರಿಗೂ ಸರಿ ಸಮನಾಗಿರುವ ಗುಣಗಳು. ಇವರ ಮೇಲೆ ಪರಿಸರವಾಗಲಿ ನಾಗರಿಕತೆಯಾಗಲಿ ಪ್ರಭಾವ ಬೀರದು. ಮನುಕುಲದ ಇಂಥ ಮೂಲಭೂತ ಪ್ರವೃತ್ತಿಗಳನ್ನು ಯುಗಯುಗಾಂತರಗಳ ನಾಗರಿಕತೆಗಳಾವುವೂ ಬದಲಿಸಲಾರವು"[೧]

ಪುರಾತನ ಗಾದೆಗಳು ಯಾವ ದೇಶದಲ್ಲಿ ಹುಟ್ಟಿದುವೆಂಬ ಅಂಶವೂ ವಿದ್ವಾಂಸರ ಕುತೂಹಲಕ್ಕೆ ಕಾರಣವಾಯಿತು. ಬಾಬಿಲೋನಿಯಾ, ಈಜಿಪ್ಟ್, ಭಾರತ ಮುಂತಾದ ದೇಶಗಳ ಅತಿ ಪ್ರಾಚೀನ ಗ್ರಂಥಗಳಲ್ಲಿ ಗಾದೆಗಳು ಕಂಡುಬರುತ್ತವೆ. ಏಸುಕ್ರಿಸ್ತನ ಸುವಾರ್ತೆಗಳಲ್ಲಿ ಗಾದೆಗಳನ್ನು ಬಳಸಿಕೊಂಡಿದ್ದಾರೆ. ಮುಸ್ಲಿಮರ ಖುರಾನ್‌ಗಳಲ್ಲಿ ಗಾದೆಗಳನ್ನು ಹೋಲುವ ಹೇಳಿಕೆಗಳಿವೆ. ವೇದಗಳಲ್ಲಿಯೂ, ಉಪನಿಷತ್ತುಗಲಲ್ಲಿಯೂ, ಸುಭಾಷಿತ-ಗಳಲ್ಲಿಯೂ, ನುಡಗಟ್ಟುಗಳಲ್ಲಿಯೂ ಅಸಂಖ್ಯಾತವಾಗಿ ಗಾದೆಗಳು ಕಾಣಿಸುತ್ತವೆ. ಪ್ರಾಚೀನ ಕಾಲದ ಭಾರತೀಯ ಋಷಿಮುನಿಗಳು, ಅರಿಸ್ಟಾಟಲ್,

೧. ನಂ.ತಪಸ್ವೀಕುಮಾರ್, ಕನ್ನಡ ಗಾದೆಗಳ ಸಮೀಕ್ಷೆ, ಪು. ೧೩.

ಪ್ಲೇಟೋ ಮುಂತಾದ ದಾರ್ಶನಿಕರು ಬಹಳವಾಗಿ ಗಾದೆಗಳನ್ನು ಬಳಸಿದ್ದಾರೆ. ಈ ಮಹಾನ್ ವಿದ್ವಾಂಸರು ಹೇಳಿದ ವಾಕ್ಯಗಳು ಗಾದೆಗಳಾಗಿರುವುದನ್ನು ಕಾಣಬಹುದು.

ಗಾದೆಗಳು ಗದ್ಯ ಪದ್ಯಗಳಿಂದ ರಚಿತವಾಗಿವೆ ಎಂದು ಹೇಳಬಹುದು. ಅಂದರೆ ಗದ್ಯವೆಂದರೆ ಸಾಮಾನ್ಯ ಗದ್ಯವಲ್ಲ. ಪದ್ಯವೆಂದರೆ ನಿರ್ದಿಷ್ಟವಾದ ಪದ್ಯವಲ್ಲ. ಒಂದು ರೀತಿಯಲ್ಲಿ ವಚನ ಸಾಹಿತ್ಯವನ್ನು ಹೋಲುವ ರೀತಿ ಇರುತ್ತವೆ. ಸ್ವಾಭಾವಿಕವಾಗಿ ಗಾದೆಗಳು ಛಂದೋಬದ್ಧತೆ, ಆಲಂಕಾರಿಕ, ಪ್ರಾಸಾನುಪ್ರಾಸ, ಲಯಬದ್ಧವಾಗಿವೆ.

ಕನ್ನಡ ಗ್ರಂಥಸ್ಥ ಪ್ರೌಢ ಸಾಹಿತ್ಯಕ್ಕೆ ಕ್ರಿ.ಶ.೧೫೦೦ ವರ್ಷಗಳಷ್ಟು ಸುದೀರ್ಘ ಐತಿಹಾಸಿಕ ಹಿನ್ನೆಲೆಯಿದೆ. ಕನ್ನಡ ಸಾಹಿತ್ಯದಲ್ಲಿ ಸಿಕ್ಕಿರುವ ಗ್ರಂಥಗಳಲ್ಲಿ ಬಹಳ ಪ್ರಮುಖವಾದದ್ದು. ಕ್ರಿ.ಶ. ಸು. ೯ನೆಯ ಶತಮಾನದ 'ಕವಿರಾಜಮಾರ್ಗ'. ಆದರೆ ಕನ್ನಡ ಸಾಹಿತ್ಯದ ಕೃಷಿ ಪ್ರಾರಂಭವಾದದ್ದು. ಕ್ರಿ.ಶ. ಸುಮಾರು ೪೫೦ರ ಹಲ್ಮಿಡಿ ಶಾಸನದಿಂದ. 'ಕವಿರಾಜಮಾರ್ಗ'ದಲ್ಲಿ ಕನ್ನಡ ನಾಡಿನ ವಿಸ್ತಾರ, ಜನಪದ ಸಹಜ ಕಾವ್ಯ ನಿರ್ಮಾಣ, ಕನ್ನಡಿಗರ ರೀತಿನೀತಿಗಳು ಮುಂತಾದವುಗಳನ್ನು ಗಮನಿಸಬಹುದು. ಈ ಗ್ರಂಥದಲ್ಲಿ ಬಳಕೆಯಾಗರುವ 'ಎರಡಕ್ಕೆ ಬಟ್ಟ ಕುಱುವಂ ಪೋಲ್ಗುಂ' ಗಾದೆಗಳಿಗೆ ಸಾಕ್ಷಿಯಾಗಿವೆ. ಕ್ರಿ.ಶ. ಸು. ೯೨೦ರಲ್ಲಿ ರಚಿತವಾದ ಕನ್ನಡದ ಪ್ರಥಮ ಉಪಲಬ್ಧ ಕೃತಿ ವಡ್ಡಾರಾಧನೆಯಲ್ಲೂ ಹಲವಾರು ಸೂಕ್ತಿ ಗಾದೆಗಳಿವೆ. ಉದಾಹರಣೆಗೆ: ಕಳ್ಳನ ಒಳ್ಳಿದನ ಎಂದಡೆ ಆತನ ಕಳ್ಳನ, 'ಅಱಿಪಬಳ್ಳಿ ಕಾಲ್ತೊಡರ್ದತ್ತು' ಮುಂತಾದವು.

ರನ್ನನ 'ಗದಾಯುದ್ಧ' ಮತ್ತು ಪಂಪಮಹಾಕವಿಯ 'ಪಂಪಭಾರತ'ದಲ್ಲಿ ಅನೇಕ ಗಾದೆಗಳು ಬಳಕೆಯಾಗಿವೆ. ಉದಾ:-

'ಅಂದು ಪುಟ್ಟಿದರ ಅಂದೆ ಸತ್ತರ'

'ಸತ್ತವರನ ಎತ್ತುವರಾರ'

'ನೆರೆದರ ಅಗಲ್ವರ, ಪುಟ್ಟುವರ ಪೊಂದುವರ್',

'ಹಿತಮಿತ ಮೃದು ವಚನ'

ಕನ್ನಡ ನಾಡಿನ ಜನತಾಕವಿಗಳಾದ ನಯಸೇನ, ಶಿವಶರಣ, ವಚನಕಾರರು, ಕುಮಾರವ್ಯಾಸ, ಲಕ್ಷ್ಮೀಶ, ರತ್ನಾಕರವರ್ಣಿ, ಹರಿದಾಸರು, ಸರ್ವಜ್ಞ ಮುಂತಾದವರು ಸಾಹಿತ್ಯದಲ್ಲಿ ಗಾದೆಗಳನ್ನು ಬಳಸಿರುವುದಕ್ಕೆ ಸಾಕ್ಷಿಯಾಗಿದ್ದಾರೆ. ಮುಂದೆ ಶಿಷ್ಟ ಮತ್ತು ಜನಪದ ಸಾಹಿತ್ಯವೆಂದು ಕವಲೊಡೆದು ಈ ಎರಡು ಸಾಹಿತ್ಯಗಳಲ್ಲಿಯೂ ಗಾದೆಗಳ

ಬಳಕೆಯನ್ನು ಕಾಣಬಹುದು. ಗಾದೆಗಳ ಬೆಳವಣಿಗೆ ಹೊಸ ಹೊಸ ಗಾದೆಗಳ ಸೃಷ್ಟಿಗೆ ಕಾರಣವಾಗಿದೆ. ಉದಾ: 'ಮೇಸ್ತ್ರಿಗೆ ಒಂದು ಊರಿಲ್ಲ, ಕೊಕ್ಕರೆಗೆ ಒಂದು ಕೆರೆಯಿಲ್ಲ'

ಗಾದೆಗಳಿಂದ ಕನ್ನಡ ಸಾಹಿತ್ಯಕ್ಕೆ ಅಪಾರ ಪ್ರಯೋಜನಗಳಿವೆ. ಸಮಾಜದ ಒಂದು ಘಟಕ ಕುಟುಂಬ. ಕೌಟುಂಬಿಕ ರೀತಿನೀತಿಗಳನ್ನು ಯೋಗಕ್ಷೇಮಗಳಿಗೆ ಸಂಬಂಧಿಸಿದಂತೆ ಹಲವು ಗಾದೆಗಳು ಇವೆ. ಸುಖದುಃಖ, ಕಷ್ಟಕಾರ್ಪಣ್ಯ, ಪ್ರೀತಿ-ದ್ವೇಷ ಮುಂತಾದವು ಕುಟುಂಬದ ಎಲ್ಲಾ ಮುಖಗಳನ್ನು ಎಲ್ಲಾ ರಹಸ್ಯಗಳನ್ನು, ಎಲ್ಲಾ ಆಗುಹೋಗುಗಳನ್ನು ಪ್ರತಿಬಿಂಬಿಸುತ್ತವೆ. ಉದಾ:-

"ಹೆಣ್ಣು ಹಡೆಯೋದು ಬೇಡ, ಪರರಿಗೆ ಕೊಡೋದು ಬೇಡ". ಮನುಷ್ಯನ ಶೀಲಸ್ವಭಾವಗಳನ್ನು, ನಡೆನುಡಿಗಳನ್ನು, ತಿಳಿದುಕೊಳ್ಳಲು ಪ್ರಯೋಜನಕಾರಿಯಾಗಿವೆ ಗಾದೆಗಳು.

"ನೂಲಿನಂತೆ ಸೀರೆ, ತಾಯಿಯಂತೆ ಮಗಳು"

"ತಾಯಿ ನೋಡಿ ಹೆಣ್ಣು ತಂದುಕೋ, ಹಾಲು ನೋಡಿ ಎಮ್ಮೆ ಕೊಂಡುಕೋ"

ಲೋಕಾನುಭವದ ಗಾದೆಗಳಲ್ಲಿ ನೀತಿ, ನಯ, ಆಚಾರ, ಅನಾಚಾರಗಳು ಹೊರಹೊಮ್ಮುತ್ತವೆ. ಮಾನ ಮರ್ಯಾದೆ ಮನುಷ್ಯನಿಗೆ ಬಹಳ ಮುಖ್ಯ ಎಂಬುದನ್ನು ಗಾದೆಗಳ ಸ್ಥಾನ ಮಹತ್ವದಾಗಿದೆ.

ಉದಾ: "ಮಾಡೋದು ಅನಾಚಾರ, ಮನೆ ಮುಂದೆ ಬೃಂದಾವನ"

"ಅಡಿಕೆಗೆ ಹೋದ ಮಾನ ಆನೆ ಕೊಟ್ಟರೂ ಬರಲ್ಲಾ"

"ಮನೆ ಕಟ್ಟಿ ನೋಟು, ಮದುವೆ ಮಾಡಿ ನೋಡು"

"ತಂದೆಯಂತೆ ಮಗ ಮರದಂತೆ ನೊಗ"

ಸಮಾಜದಲ್ಲಿ ಮನುಷ್ಯ ಸುಖಸಮೃದ್ಧಿಯಿಂದ ಬದುಕುವಂತೆ ಪ್ರೇರಣೆ ನೀಡುತ್ತವೆ ಗಾದೆಗಳು. ಮಾನವನ ಮನಸ್ಸು ತಿದ್ದುವ ತೀಡುವ ಧರ್ಮದ ತತ್ವವನ್ನು ರಕ್ಷಿಸುವ ಕೆಲಸವನ್ನು ಮಾಡುತ್ತವೆ. ಗಾದೆಗಳು ಮಾನವನ ಮನಸ್ಸನ್ನು ಪರಿವರ್ತನೆ ಬದಲಾವಣೆ ಮಾಡುವ ಕೆಲಸವನ್ನು ಗಾದೆಗಳು ಮಾಡುತ್ತವೆ. ಉದಾ:-

"ಗುರುವಿಗೆ ಗುಟುಕು ನೀರು, ಶಿಷ್ಯನಿಗೆ ಸಣ್ಣ ಸ್ನಾನಿಗೆ"

"ಗುರುವಿಲ್ಲದೋನಿಗೆ ಇದ್ಯವಿಲ್ಲ ಗಂಟಿಲ್ಲದೋನಿಗೆ ನಷೆ ಇಲ್ಲ"

ಗಾದೆಗಳು ಒಂದು ನಾಡಿನ ಸಂಸ್ಕೃತಿಯ ದ್ಯೋತಕವಾಗಿದೆ. ಆದರ್ಶಮಯವಾಗಿ ಬದುಕು, ದೂರದೃಷ್ಟಿ ಆಲೋಚನೆಗಳನ್ನು ನೀಡುತ್ತವೆ ಗಾದೆಗಳು. **ಉದಾ:**

"ಹಂಗಿನ ಅರಮನೆಗಿಂತ ಗುಡಿಸಲು ಗಂಜಿ ಲೇಸು"

"ಕುತ್ಕೊಂಡು ಉಂಡ್ರೆ ಕುಡಿಕೆ ಹಣನೂ ಸಾಲಲ್ಲ"

ಗಾದೆಗಳು ಜನತೆಯಲ್ಲಿ ಔದಾರ್ಯವನ್ನು ಮನಸ್ಸಿನ ಪರಿಪಕ್ವತೆಯನ್ನು ಎತ್ತಿತೋರಿಸುತ್ತವೆ. ಗಾದೆಗೀಳು ಜನತೆಯಲ್ಲಿ ಮುಯ್ಯಿಗೆ ಮುಯ್ಯಿ ಪರಿಹಾರವಲ್ಲ. ಪರಸ್ಪರ ಪ್ರೀತಿ, ಸಹಕಾರ, ಹೊಂದಾಣಿಕೆ, ಸಮೃದ್ಧಿ ಬದುಕು ಎಂಬ ನೀತಿಯನ್ನು ಗಾದೆಗಳು ಎತ್ತಿತೋರುತ್ತವೆ. ಸಾಮಾಜಿಕ ಹೊಣೆಗಾರಿಕೆ ಮನುಷ್ಯನ ಹೊಣೆ ಎಂಬುದನ್ನು ಪ್ರತಿಬಿಂಬಿಸುತ್ತವೆ.

ಗಾದೆಗಳು ಸಾಹಿತ್ಯ ಮತ್ತು ಭಾಷಿಕ ವಲಯದಲ್ಲಿ ಮಹತ್ವದ ಸ್ಥಾನವನ್ನು ಗಳಿಸಿಕೊಡುತ್ತವೆ. ಕೇವಲ ನೀತಿ ಅಥವಾ ಅನುಭವಗಳ ಜೊತೆಗೆ ಪ್ರಾಸ, ಲಯ, ಅಲಂಕಾರ ಪಾಕ ಮೊದಲಾದ ಕಾವ್ಯಗುಣಗಳನ್ನು ಹೇಳುತ್ತವೆ. ಉದಾ:–

'ಹಾಕ್ಮಣೆ ನೂಕ್ಮಣೆ ಯಾಕ್ಮಣೆ'

'ಕಾಣದೂರಿಗೆ ನಾಲಗೆಯೇ ದಾರಿ'

ಭಾಷೆಯ ಸಾಚಾತನವನ್ನು ಪ್ರತಿಬಿಂಬಿಸುವಲ್ಲಿ ಗಾದೆಗಳು ಮಹತ್ವದ ಸ್ಥಾನಗಳಿಸಿಕೊಂಡಿವೆ. ಹಳ್ಳಿಗರ ಬಾಯಲ್ಲಿ ಬಿದ್ದಂತೆಯೆ ಆಯ್ದುಕೊಂಡು ಜಾನಪದ ಸೊಗಡು ಭಾಷೆಯಿಂದ ರಚಿತವಾಗಿದೆ. ಜನವಾಣಿಯ ಪದಗಳು ಸುಮಧುರ–ವಾಗಿರುತ್ತವೆ. ಮಣ್ಣಿನ ವಾಸನೆಯಿಂದ ಕೂಡಿರುತ್ತವೆ.

ಗಾದೆಗಳು ಮಾತಿಗೊಂದು ಬಿಗಿಯನ್ನು ಹಿಡಿತವನ್ನು ತಂದುಕೊಡುತ್ತವೆ. ಗಾದೆಗಳು ರಾಷ್ಟ್ರೀಯ ಭಾವೈಕ್ಯತೆಯನ್ನು ಗಳಿಸುವಲ್ಲಿ ಸಹಾಯಕವಾಗಿವೆ. ಗಾದೆಗಳ ಜನವಾಣಿ ಸುಮಧುರವಾಣಿ. ಮಾನವನ ನಡೆನುಡಿಯ, ಸ್ವಭಾವದ, ಕಷ್ಟಸುಖ, ತಾಳ್ಮೆ, ಕರುಣೆ, ಭವಿಷ್ಯದ ಜಾಗ್ರತೆ ಮುಂತಾದವುಗಳನ್ನು ಪ್ರತಿಬಿಂಬಸುತ್ತವೆ. ಜನಪದ ಸಾಹಿತ್ಯದ ಪ್ರಮುಖ ಪ್ರಕಾರಗಳಲ್ಲಿ ಗಾದೆ ಒಂದಾಗಿದೆ.

## ಅಧ್ಯಾಯ ೩

# ದೊಡ್ಡಪುರ ಗ್ರಾಮ – ಒಂದು ಪರಿಚಯ

ಅರೆಮಲೆನಾಡು ಪ್ರದೇಶವೆಂದು ಕರೆಸಿಕೊಳ್ಳುವ ಹಾಸನಜಿಲ್ಲೆಯು ಶಿಲ್ಪಕಲೆಯ ತವರೂರು. ಬೇಲೂರು, ಹಳೆಬೀಡು, ಶ್ರವಣಬೆಳಗೊಳ ಇವು ಹಾಸನ ಜಿಲ್ಲೆಯ ಪ್ರಸಿದ್ಧ ಶಿಲ್ಪಕಲೆಯ ಪ್ರೇಕ್ಷಣೀಯ ಸ್ಥಳಗಳು. ಪ್ರೇಕ್ಷಣೀಯ ಸ್ಥಳಗಳಾದ ಇವು ಸಂಸ್ಕೃತಿಯ ಪ್ರತೀಕಗಳಾಗಿವೆ. ಕರ್ನಾಟಕ ಸಂಸ್ಕೃತಿಗೆ ಇವು ಅಮೋಘ ಕೊಡುಗೆಗಳು. ಸುಪ್ರಸಿದ್ಧ ಕಲೆ, ಪ್ರವಾಸಿ ತಾಣ, ಸಮೃದ್ಧ ಕೃಷಿ ಭೂಮಿಯನ್ನು ಹೊಂದಿದೆ ಹಾಸನಜಿಲ್ಲೆ.

ಪ್ರಸಿದ್ಧ ಸ್ಥಳವಾದ ಹಾಸನ ಜಿಲ್ಲೆಯ ಹಾಸನ ತಾಲ್ಲೂಕಿನ ಸರಿ ಸುಮಾರು ೭–೮ ಕಿ.ಮೀ. ಸಮೀಪದಲ್ಲಿರುವ ಹಳ್ಳಿ ದೊಡ್ಡಪುರ ಗ್ರಾಮ. ಈ ದೊಡ್ಡಪುರ ಗ್ರಾಮಕ್ಕೆ ೩೦೦ ವರ್ಷಗಳ ಇತಿಹಾಸವಿದೆ. ಮೊದಲಿಗೆ ಈ ಗ್ರಾಮದ ಹೆಸರು ಬಸವಪುರ ಎಂದಿತ್ತು. ಬಸವಪುರದಲ್ಲಿ ಮೊದಲಿಗೆ ಬಸವಣ್ಣ ದೇವಸ್ಥಾನವಿದೆ. ಬಸವಣ್ಣ ದೇವಸ್ಥಾನವಿರುವ ಸ್ಥಳ ತಪಸ್ವಿ ಯೋಗಿಗಳ ಸಮಾಧಿ ಎಂದು ಐತಿಹ್ಯ ಹೇಳುತ್ತದೆ. ಈ ಬಸವಣ್ಣ ದೇವಸ್ಥಾನದಲ್ಲಿ ಎರಡು ಕಲ್ಲುಗಳಿವೆ. ಒಂದು ಕಲ್ಲು ಹುಟ್ಟಿದ್ದು ಮತ್ತೊಂದು ಕಲ್ಲನ್ನು ಕಡೆದು ನಿಲ್ಲಿಸಿದ್ದಾರೆ. ಆ ಬಸವಣ್ಣ ಗುಡಿಯ ಸುತ್ತಮುತ್ತಲಿನ ಪ್ರದೇಶವು ನಿಡೂಡಿ ಗ್ರಾಮದ ಒಂದು ಗೌಡನದು. ಗೌಡನಿಗೆ ೧೩ ಜೋಡಿ ಎತ್ತು ೨೩ ಜನ ಆಳುಕಾಳುಗಳು ಇದ್ದವು. ಆ ಹದಿಮೂರು ಜನ ಎತ್ತು ಜೋಡಿಗಳು ಹೊಲವನ್ನು ಉಳುಮೆ ಮಾಡುತ್ತಿದ್ದಾಗ ಆ ಒಂದು ಜೋಡಿ ಎತ್ತಿನ ನೇಗಿಲಿನ ಬಾಯಿಗೆ ಈಶ್ವರನ ಲಿಂಗವು ಸಿಕ್ಕಿತು. ಹಿಂದಿರುಗಿ ನೋಡಿದಾಗ ಆ ಲಿಂಗದಿಂದ ಧಾರಾಕಾರವಾಗಿ ರಕ್ತ ಹರಿದು ಬರುತ್ತಿತ್ತು. ಅದನ್ನು ನೋಡಿದ ವ್ಯಕ್ತಿಯು ಅಲ್ಲೆ ರಕ್ತಕಾರಿ ಸತ್ತನೆಂದು ಐತಿಹ್ಯವಿದೆ. ಇನ್ನು ಉಳಿದ ಎತ್ತುಗಳಿಗೆ, ದನಗಳಿಗೆ ರೋಗ ಪ್ರಾರಂಭವಾಯಿತು. ಆಗ ಆ ಯಜಮಾನನು ಲಿಂಗದ ಬಳಿಗೆ ಬಂದು ನನ್ನ ಎತ್ತುಗಳು ಮತ್ತು ಆಳುಗಳು ಉಳಿಸಿಕೊಟ್ಟರೆ ಈ ಸ್ಥಳವನ್ನು ದೇವಸ್ಥಾನಕ್ಕೆ ಬಿಡುವುದಾಗಿ ಹರಕೆಯನ್ನು ಇತ್ತನು. ಹರಕೆ ಇತ್ತ ಸ್ವಲ್ಪ ದಿನಗಳಲ್ಲಿ ಎತ್ತುಗಳಿಗೆ ಮತ್ತು ಆಳುಕಾಳುಗಳಿಗೆ ಆರೋಗ್ಯ ಸರಿಯಾಯಿತು. ಲಿಂಗಕ್ಕೆ ಪೆಟ್ಟು ಬಿದ್ದು ರಕ್ತ ಧಾರಾಕಾರವಾಗಿ ಹರಿದು ಹತ್ತಿಮರವಾಗಿದೆ ಎಂಬುದು ಪ್ರತೀತಿ. ಈಶ್ವರ ಲಿಂಗವು ಭೂಮಿಯನ್ನು ಉಳುವಾಗ ಸಿಕ್ಕಿತು. ಅಂದಿನಿಂದ ಉದ್ಭವ ರಾಮೇಶ್ವರ ಎಂದು ಪ್ರಸಿದ್ಧಿ ಪಡೆದಿದೆ. ಈಗಲೂ ಈಶ್ವರನ ಲಿಂಗದ ನೆತ್ತಿಯ ಮೇಲೆ ಆ ನೇಗಿಲ ಗುರುತು ದೆ. ಈಗಲೂ ಈಶ್ವರಲಿಂಗ ಬೆಳೆಯುತ್ತಿದೆ ಎಂದು ಹೇಳುತ್ತಾರೆ.

ಪ್ರಾರಂಭದಲ್ಲಿ ದೊಡ್ಡಪುರ ಗ್ರಾಮಕ್ಕೆ ಮೊದಲು 'ಪುರ' ಎಂದು ಇದ್ದು ತದನಂತರ ದೊಡ್ಡಪುರ ಗ್ರಾಮವಾಗಿದೆ. ಪ್ರಾರಂಭದಲ್ಲಿ ಬಸವಪುರ ಎಂಬುದು ಪುರ ಎಂದಾಗಿ ನಂತರ 'ದೊಡ್ಡಪುರ'ವಾಗಿದೆ. ಈ ದೊಡ್ಡಪುರ ಗ್ರಾಮದಲ್ಲಿರುವ ನಿವಾಸಿಗಳು ಮೂಲತಃ ಬೇರೆ ಬೇರೆ ಊರಿನಿಂದ ಬಂದು ಸೇರದವರಾಗಿದ್ದಾರೆ. ಈ ಊರಿಗೆ ಉದ್ಭವ ರಾಮೇಶ್ವರ ನಗರವು ಹೊಂದಿಕೊಂಡಂತೆ ಇದೆ.

ದೊಡ್ಡಪುರ ಗ್ರಾಮದ ಮೊದಲ ನಿವಾಸಿ ಮೊದಲ ಮನೆ ಈರಣ್ಣನವರದ್ದು. ಈರಣ್ಣನ ತಾತ ಮುತ್ತಜ್ಜನ ಕಾಲದಲ್ಲಿ ಈ ಮನೆ ನಿರ್ಮಾಣವಾಗಿದೆ. ಬೇರೆ ಬೇರೆ ಊರಿನಿಂದ ವಲಸೆ ಬಂದು ಸೇರಿದ್ದಾರೆ. ಮೊದಲಿಗೆ ಈ ದೊಡ್ಡಪುರ ಗ್ರಾಮ ೩೦ ಮನೆಗಳಿಂದ ಕೂಡಿದ್ದು, ಈ ಮನೆಗಳ ಸಾಲು ಈಗ ಸುಮಾರು ೩೦೦ ಮನೆಗಳಿಂದ ಕೂಡಿದ್ದು ದೊಡ್ಡಪುರ ಎಂಬ ಹೆಸರಿಗೆ ತಕ್ಕಂತೆ ಇದೆ.

ಈ ಗ್ರಾಮದಲ್ಲಿ ಬ್ರಾಹ್ಮಣ, ಲಿಂಗಾಯಿತ, ಚಿನ್ನ ಬೆಳ್ಳಿ ಆಚಾರ್, ಮರಗೆಲಸದ ಆಚಾರ್ ಮತ್ತು ದಲಿತರು ಇದ್ದಾರೆ. ಈ ಗ್ರಾಮದ ಪ್ರಬಲ ಜಾತಿ ಒಕ್ಕಲಿಗರು. ದೊಡ್ಡಪುರದ ಗ್ರಾಮವು ಸುಮಾರು ೮೫೬-೧೦೦೦ ಜನಸಂಖ್ಯೆಗಳನ್ನು ಒಳಗೊಂಡಿದೆ.

ದೊಡ್ಡಪುರ ಗ್ರಾಮದ ಒಟ್ಟು ಭೂಮಿಯ ಭೌಗೋಳಿಕ ವಿಸ್ತೀರ್ಣ ೧೦೯೧-೨೯ ಹೆಕ್ಟೇರ್‌ಗಳನ್ನು ಹೊಂದಿದೆ. ಇದರಲ್ಲಿ ಖರಾಬು ಕಳೆದು ಜಮೀನು ೨೦೦ ಎಕರೆ ೧೧ ಕುಂಟೆ. ಒಟ್ಟು ಸಾಗುವಳಿಯಾಗುತ್ತಿರುವ ಭೂಮಿಯ ವಿಸ್ತೀರ್ಣವು ೧೯೧ ಎಕರೆ ೧೮ ಕುಂಟೆ ವ್ಯಾಪ್ತಿ ಪ್ರದೇಶವು ಉತ್ತರದಲ್ಲಿ ಬಿ.ಟಿ.ಕೊಪ್ಪಲು, ಪೂರ್ವಕ್ಕೆ ಚಿಬ್ಬೇನಹಳ್ಳಿ ಕೋರಮಂಗಲ ಕಾವಲು, ದಕ್ಷಿಣಕ್ಕೆ ಚರನಹಳ್ಳಿ ನಿಡೂಡಿ ಪಶ್ಚಿಮಕ್ಕೆ ಚಿಟ್ನಹಳ್ಳಿ ಈ ಪ್ರದೇಶದ ಭೂಮಿಯು ಫಲವತ್ತಾಗಿದ್ದು ಇಲ್ಲಿಯ ಪ್ರಮುಖ ವಾಣಿಜ್ಯಬೆಳೆ ಆಲೂಗೆಡ್ಡೆ. ದೊಡ್ಡಪುರದಲ್ಲಿ ಆಲೂಗೆಡ್ಡೆಯನ್ನು ಸುಮಾರು ಒಂದು ಮನೆಯಲ್ಲಿ ೫೦ ಕ್ವಿಂಟಾಲ್‌ನಿಂದ ೩೦೦ ಕ್ವಿಂಟಾಲ್ ಬೆಳೆಯುವವರು ಇದ್ದಾರೆ. ಈ ಗ್ರಾಮದ ಪ್ರಮುಖ ಬೆಳೆ ರಾಗಿ, ಜೋಳ, ಅವರೆ, ತೊಗರ, ತಿಂಗಳುಳ್ಳ, ತಗಣಿಕಾಳು, ಎಣ್ಣೆಕಾಳುಗಳು, ಹುಚ್ಚೆಳ್ಳು, ದಪ್ಪಳು ಮುಂತಾದವು. ದೊಡ್ಡಪುರ ಗ್ರಾಮದ ,ಬಹುಮಟ್ಟಿನ ಜನರು ವ್ಯವಸಾಯವನ್ನು ನಂಬಿಕೊಂಡು ಬದುಕುತ್ತಿದ್ದಾರೆ.

ಮೊದಲಿಗೆ ನೇಗಿಲಿನಿಂದ, ಎತ್ತುಗಳಿಂದ ಉತ್ತು ಬೇಸಾಯ ಮಾಡುತ್ತಿದ್ದರು. ನಗರೀಕರಣ, ಕೈಗಾರಿಕೀಕರಣದ ಪ್ರಭಾವದಿಂದ ಉಳುವ ಸಾಧನವಾಗಿ ಟ್ರಾಕ್ಟರನ್ನು ಬಳಸುತ್ತಾರೆ. ರಾಗಿಯ ಹುಲ್ಲನ್ನು ಅರೆಯಲು ರೋಣ್‌ಗಲ್ಲನ್ನು ಬಳಸುತ್ತಿದ್ದರು. ಆದರೆ ರೋಣ್‌ಗಲ್ಲು ಮೂಲೆಗುಂಪಾಗ ಟ್ರ್ಯಾಕ್ಟರನ್ನು ರಾಗಿಹುಲ್ಲು ಅರೆಯಲು ಬಳಸುತ್ತಾರೆ.

ದೊಡ್ಡಪುರ ಗ್ರಾಮದ ವ್ಯವಸಾಯ ಮಾನ್ಸೂನ್‌ನೊಡನೆ ಆಡುವ ಜೂಜಾಟವಾಗಿದೆ. ಇಲ್ಲಿಯ ರೈತರು ವ್ಯವಸಾಯವನ್ನು ಮುಖ್ಯ ಕಸುಬನ್ನಾಗಿ ಮಾಡಿಕೊಂಡಿದ್ದಾರೆ. ದೊಡ್ಡಪುರ ಗ್ರಾಮದ ನೀರಾವರಿ ಪ್ರದೇಶವು ೪ ಎಕರೆಗಳನ್ನು ಒಳಗೊಂಡಿದೆ. ದೊಡ್ಡ ಕಟ್ಟೆ, ಹತ್ತಿಕಟ್ಟೆ, ವಡಗಟ್ಟೆ, ತಿಪ್ಪೆಗುಂಡಿ. ಈ ಕೆರೆಗಳು ಅಷ್ಟೇನು ನೀರಿನ ಒಳ ಅರಿವನ್ನು ಹೊಂದಿಲ್ಲದಿದ್ದರೂ, ದನಕರುಗಳಿಗೆ ಕುಡಿಯುವ ನೀರು ಮತ್ತು ಗದ್ದೆಗಳಿಗೆ ನೀರನ್ನು ಒದಗಿಸುತ್ತದೆ. ಭತ್ತವು ಮುಖ್ಯ ಬೆಳೆಯಲ್ಲದಿದ್ದರೂ ವರ್ಷದಲ್ಲಿ ಎರಡು ಅಥವಾ ಒಂದು ಬೆಳೆಯನ್ನು ಬೆಳೆಯುತ್ತಾರೆ. ಈ ನಾಲ್ಕು ಕಟ್ಟೆಗಳ ಪೈಕಿ ದೊಡ್ಡಕಟ್ಟೆಯು ನಿಡೂಡಿ ಮತ್ತು ದೊಡ್ಡಪುರ ಗ್ರಾಮಕ್ಕೆ ಸಮಭಾಗವಾಗಿ ಹಂಚಿದೆ. ಈ ದೊಡ್ಡಕಟ್ಟೆಯನ್ನು ಒಂದು ಗುಳ್ಳೆ ನರಿಯು ದೊಡ್ಡಪುರ ಮತ್ತು ನಿಡೂಡಿ ಗ್ರಾಮಗಳಿಗೆ ಹಂಚಿಕೊಟ್ಟಿದೆ ಎಂದು ಐತಿಹ್ಯವಿದೆ. ದೊಡ್ಡಪುರ ಗ್ರಾಮದವರು ನಮಗೆ ಸಂಪೂರ್ಣ ಕರೆ ಬರಬೇಕೆಂದು, ಆದರೆ ನಿಡೂಡಿ ಗ್ರಾಮದವರೂ ನಮಗೆ ಸಂಪೂರ್ಣ ಕೆರೆ ಬರಬೇಕೆಂದು ಎರಡೂ ಗ್ರಾಮಗಳು ಜಿದ್ದಾಜಿದ್ದಿ ಜಗಳಾಟವನ್ನು ಮಾಡುತ್ತಿದ್ದಾಗ ಗುಳ್ಳೆ ನರಿಯು ಈ ನ್ಯಾಯ ತೀರ್ಮಾನವನ್ನು ಮಾಡಿತು ಎಂಬ ದಂತಕತೆಯಿದೆ. ಗುಳ್ಳೆನರಿಯು ಎರಡು ಗ್ರಾಮದವರನ್ನು ಕರೆದು ಕೆರೆಯ ಏರಿಯ ಮೇಲೆ ಪೂಜೆ ಮಾಡಲು ಹೇಳಿತಂತೆ. ಹಣ್ಣು, ಕಾಯಿ, ಹೂ, ಊದುಬತ್ತಿಗಳಿಂದ ಮೂರು ಕಲ್ಲುಗಳನ್ನು ಇಟ್ಟು ಪೂಜೆಯನ್ನು ಮಾಡಿದರಂತೆ. ಪೂಜೆ ಮುಗದ ಬಳಿಕ ಬಲಿಯಾಗಿ ಕೋಳಿಯನ್ನು ಕೊಡಲು ಹೇಳಿತಂತೆ ಕೋಳಿಯನ್ನು ಬಲಿಯಾಗಿ ಕೊಟ್ಟರಂತೆ. ಆಗ ಆ ಗುಳ್ಳೆನರಿಯು ತನ್ನ ಬಾಯಿಂದ ರಕ್ತ ಸೋರುವ ಕೋಳಿಯನ್ನು ಹಿಡಿದು ಕೆರೆಯ ಮಧ್ಯ ಭಾಗದಲ್ಲಿ ಹೋಗಿ ಅಲ್ಲಿಗೆ ಕಲ್ಲನ್ನು ನೆಟ್ಟುಗೊಳ್ಳಲು ಹೇಳಿ ನಿಡೂಡಿ ಗ್ರಾಮಕ್ಕೆ ಅರ್ಧಕೆರೆಯನ್ನು ಇನ್ನರ್ಧ ಕೆರೆಯನ್ನು ದೊಡ್ಡಪುರ ಗ್ರಾಮಕ್ಕೆ ಹಂಚಲಾಗಿದೆ.

ದೊಡ್ಡಪುರ ಗ್ರಾಮದ ನ್ಯಾಯ ಪದ್ಧತಿಯ ಪಂಚಾಯಿತಿ ಕಟ್ಟೆಯ ಮೂಲಕ ನಡೆಯುತ್ತಿತ್ತು. ಯಾವುದೇ ವಿಷಯಕ್ಕೆ ಸಂಬಂಧಪಟ್ಟಿರುವ ವಿಷಯಗಳನ್ನು ಹಳ್ಳಿಯಲ್ಲಿ ಗೌಡಿಕೆಯ ಎದುರಿನಲ್ಲಿ ನ್ಯಾಯ ತೀರ್ಮಾನವಾಗುತ್ತಿದ್ದವು. ಪಟೇಲ, ಶಾನುಬೋಗ, ಗೌಡನು ಈ ಮೂವರು ಸೇರಿ ನ್ಯಾಯ ತೀರ್ಮಾನ ಮಾಡುತ್ತಿದ್ದರು. ಆಸ್ತಿಯ ಹಂಚಿಕೆ, ಕೌಟುಂಬಿಕ ವಿಚಾರ, ಕಲಹ, ದೊಂಬಿ ಮುಂತಾದವು ಊರಿನ ಮುಖಂಡರ ಎದುರಿನಲ್ಲಿ ಪಂಚಾಯಿತಿ ಕಟ್ಟೆಯಲ್ಲಿ ತೀರ್ಮಾನಕೊಡಲಾಗುತ್ತಿತ್ತು. ಆದರೆ ಇಂದಿನ ದಿನಗಳಲ್ಲಿ ಯಾವುದೇ ಕಲಹಗಳಿಗೂ ನಗರ ಪೊಲೀಸ್ ಠಾಣೆಗಳಿಗೆ ದೂರುದಾಖಲಾಗಿ ಅಲ್ಲಿಯ ಅಧಿಕಾರಿಗಳಿಗೆ ನ್ಯಾಯ ತೀರ್ಮಾನವಾಗುತ್ತವೆ.

ಈ ಗ್ರಾಮದಲ್ಲಿ ಶಿಕ್ಷಣ ಪದ್ಧತಿಯು ಪ್ರಾರಂಭದ ದಿನಗಳಲ್ಲಿ ಕೂಲಿಮಠ ಶಿಕ್ಷಣ ಕೊಡುವ ಸಂಸ್ಥೆಯಾಗಿತ್ತು. ಅಂದಿನ ಶಿಕ್ಷಣ ಬಹಳ ಕಠಿಣ ಶಿಕ್ಷಣ ಪದ್ಧತಿಯ ಮೂಲಕ ಆಗುತ್ತಿತ್ತು. ವಿದ್ಯಾರ್ಥಿಗಳಿಗೆ ದಂಡನೆ ಖಂಡನೆಗಳು ಆಗುತ್ತಿದ್ದವು. ಆದರೆ ಇಂದು ದೊಡ್ಡಮರ ಗ್ರಾಮದಲ್ಲಿಯೇ ಅಂಗನವಾಡಿ, ಪ್ರಾಥಮಿಕಶಾಲೆ, ಪ್ರೌಢಶಾಲೆಗಳು ಇವೆ. ಅಂದಿನ ಕಾಲದಲ್ಲಿಯೇ ಎಂ.ಎ., ಬಿ.ಎಸ್ಸಿ, ಡಿಪ್ಲೊಮೋ, ಬಿ.ಎ., ಬಿ.ಇ., ಮುಂತಾದ ಪದವಿ ಪಡೆದ ಜನರಿರುವುದನ್ನು ಕಾಣಬಹುದು. ಹೆಚ್ಚಿನ ಪಾಲನ ಜನರು ಅನಕ್ಷರಸ್ಥರು ಇರುವುದನ್ನು ಕಾಣಬಹುದು. ಇಂದಿನ ಪೀಳಿಗೆಯಲ್ಲಿ ಕನಿಷ್ಟ ೧೦ನೇ ತರಗತಿಯವರಿಗೂ ಓದುವುದನ್ನು ಕಾಣಬಹುದು.

ದೊಡ್ಡಮರ ಗ್ರಾಮವು ಸಂಪ್ರದಾಯಬದ್ಧವಾಗಿ ಆಚರಣೆ ನಂಬಿಕೆಗಳನ್ನು ರೂಢಿಸಿಕೊಂಡು ಬಂದಿದೆ. ಊರಿನ ಯಜಮಾನನೆಂದೇ ಕರೆಯುವ 'ಕರಿಕಲ್ಲಿ'ನ ಆಚರಣೆಯನ್ನು ಮಾಡುತ್ತಾರೆ. ಈ 'ಕರಿಕಲ್ಲು' ಉದ್ಭವ ರಾಮೇಶ್ವರ ದೇವಸ್ಥಾನದ ಎದುರಿಗೆ ಇವೆ. ಈರಣ್ಣನ ಮನೆತನದವರು ವರ್ಷಕ್ಕೆ ಒಂದು ಬಾರಿ ಅನ್ನವನ್ನು ಅಂದರೆ ಎಡೆಯನ್ನು ಹಾಕುತ್ತಾರೆ. ಕರಿಕಲ್ಲನ್ನು ಊರಿನ ಯಜಮಾನ ಹಕ್ಕು ಎಂದೇ ಭಾವಿಸಿದ್ದಾರೆ. ಈ ಕರಿಕಲ್ಲಿನಿಂದ ಮುಂದಕ್ಕೆ ಎತ್ತಿನ ನೊಗವನ್ನು ಹಾಕಬೇಕು. ಬರುವಾಗಲೂ ಅಷ್ಟೇ ಊರಬಾಗಿಲ ಹೊರಗೆ ಎತ್ತಿನ ನೊಗವನ್ನು ಬಿಚ್ಚಬೇಕೆಂದು ನಂಬಿಕೆ ಇದೆ. ಇಲ್ಲದದ್ದರೆ ಅಪಾಯ ತಪ್ಪಿದಲ್ಲ ಎಂಬ ನಂಬಿಕೆ ಇದೆ.

ದೊಡ್ಡಮರ ಗ್ರಾಮವು ಸಂಪ್ರದಾಯಬದ್ಧವಾಗಿ ಆಚರಣೆಗಳ ಜೊತೆಗೆ ಹಬ್ಬ ಹರಿದಿನಗಳನ್ನು ಆಚರಿಸುತ್ತಾರೆ. ವರ್ಷಕ್ಕೆ ಒಂದು ಸಾರಿ ಮಾರಿಯ ಹಬ್ಬದ ಆಚರಣೆಯನ್ನು ಮಾಡುತ್ತಾರೆ. ಮಾರಿಯನ್ನು ಕಳುಹಿಸಿ ಶಿವನನ್ನು ಕರೆದು ತಾ ಎಂಬ ರೂಢಿಯಂತೆ ಶಿವರಾತ್ರಿಗೆ ಮುಂಚಿತವಾಗಿ ಮಾರಿಹಬ್ಬವನ್ನು ಮಾಡುತ್ತಾರೆ. ಜನರಿಗೆ ಅಮ್ಮ, ಕಾಲರಾ ಮುಂತಾದವುಗಳು ಊರಿಗೆ ಸೋಂಕು ಬರಬಾರದೆಂದು ಮಾರಿಹಬ್ಬದ ಆಚರಣೆಯನ್ನು ಮಾಡುತ್ತಾರೆ. ಒಣಗಿದ ಕಾಳಿನ ಪಲ್ಯ ಮತ್ತು ಟಂಟವನ್ನು ಇಟ್ಟು ಪೂಜಿಸುತ್ತಾರೆ. ಮಾರಿಯು ಎಲ್ಲರಿಗೂ ಒಳ್ಳೆಯದು ಮಾಡಲೆಂದು ಒಳ್ಳೆಣ್ಣೆಯಲ್ಲಿ ದೊಡ್ಡ ಬೇವಿನ ಸೊಪ್ಪನ್ನು ಹದ್ದಿ ಎಲ್ಲರಿಗೂ ನೆತ್ತಿಗೆ(ತಲೆ) ಹಾಕುತ್ತಾರೆ.

'ಮಿಡಿಚಿಲು' ಇದು ಒಂದು ಅಮ್ಮನ ಪೂಜೆ. ಮಿಡಿಚಿಲು ಅಮ್ಮನನ್ನು ಆಷಾಢಮಾಸದಲ್ಲಿ ಆಚರಿಸುತ್ತಾರೆ. ಮಿಡಿಚಲಮ್ಮನನ್ನು ದನಕರುಗಳಿಗೆ ಒಳ್ಳೆಯದಾಗಲಿ ಎಂದು ಬಳಸುತ್ತಾರೆ. ಈ ಹಬ್ಬವನ್ನು ಮಾಡದಿದ್ದರೆ ದನಕರುಗಳಿಗೆ ಕಪ್ಪೇರೋಗ, ಗೊರಸು, ಕಾಲ್ಬಾಯಿರೋಗಗಳು ಬರುತ್ತವೆ ಎಂಬ ನಂಬಿಕೆಗಳು ಇವೆ. ಮಣ್ಣಿನಿಂದ

ಮಿಡಿಚಲಮ್ಮನನ್ನು ಮಾಡುತ್ತಾರೆ. ಆ ಗೊಂಬೆಗೆ ಸೀರೆ ಉಡಿಸಿ ಹೆಚ್ಚಿನ ಆಕಾರಕೊಟ್ಟು ಪೂಜಿಸುತ್ತಾರೆ. ಮಿಡಿಚಲಮ್ಮನಿಗೆ ಬಲಿಯಾಗಿ ಹಂದಿಯನ್ನು ಕಡಿಯುತ್ತಾರೆ. ಆ ಹಂದಿಯ ಮಾಂಸದ ಊಟವನ್ನು ಎಡೆಯಾಗಿ ಕೊಡುತ್ತಾರೆ. ' ಪೂಜೆ ಆಚರಣೆಗಳಲ್ಲಿ ಮುಗಿದ ಮೇಲೆ ಅಮ್ಮನನ್ನು ಊರಿನಿಂದ ಆಚೆಗೆ ಈಚಲು ಮರದ ಬಳಿ ಕಳುಹಿಸಿಬರುತ್ತಾರೆ. ಈ ಆಚರಣೆಗಳನ್ನು ಸಂಪ್ರದಾಯಬದ್ಧವಾಗಿ ಕಾಲಾನುಕಾಲದಿಂದ ಆಚರಿಸುತ್ತಾ ಬಂದಿದ್ದಾರೆ.

ಅಂತರ್‌ಜಾತಿ ವಿವಾಹದ ಮಹಿಳೆಯರಿಗೆ ವರ್ಷಕ್ಕೆ ಒಂದು ಸಾರಿ ಕಲ್ಲಮ್ಮನ ಹಬ್ಬವನ್ನು ಮಾಡುತ್ತಾರೆ. ವಂಶಸ್ಥರೆಲ್ಲ ಸೇರಿ ಕೋಳಿ, ಕುರಿ, ಬಲಿಯಾಗಿ ಕೊಡುವ ಸಂಪ್ರದಾಯವನ್ನು ಕಾಣಬಹುದು. ಅಂತರ್‌ಜಾತಿ ವಿವಾಹ ಆದವರನ್ನು ಸತ್ತಮೇಲೆ ತಮ್ಮ ಜಾತಿಯ ಹಿಂಡಿಗೆ ಸೇರಿಸುವುದಿಲ್ಲ. ಆಗ ಅವರು ಆ ವಂಶಸ್ಥರಿಗೆ ತೊಂದರೆ ಕಾಟಗಳನ್ನು ಕೊಡುತ್ತಾರೆ. ಸಾಮಾನ್ಯವಾಗಿ ಈ ತೊಂದರೆಗಳೆಂದರೆ ದನಗಳು ಸಾಯುವುದು ಮನೆಯಲ್ಲಿ ಹಿರಿಕರಿಗೆ ಆರೋಗ್ಯ ಸರಿ ಇಲ್ಲದಿರುವುದು, ಹಸು ಹಾಕಿದ ಕರು ಸಾಯುವುದು ಮುಂತಾದವು. ಕಲ್ಲಮ್ಮನು ಬೇರೆ ಜಾತಿಯ ಸ್ತ್ರೀ ಆಗಿದ್ದು ಸಾಯುವಾಗ ಗರ್ಭಿಣಿಯಾಗಿದ್ದರೆ ಆ ಮಗುವಿನ ಚಿತ್ರವನ್ನು ಕಲ್ಲಿನಲ್ಲಿ ಕೆತ್ತಿಸುತ್ತಾರೆ. ಈ ಹಬ್ಬವನ್ನು ವಂಶಸ್ಥರೆಲ್ಲ ಸೇರಿ ಮಾಂಸಾಹಾರದಿಂದ ಮಾಡುವ ಹಬ್ಬವಾಗಿದೆ.

ಈ ಗ್ರಾಮದಲ್ಲಿ ಬಹಳ ವಿಶೇಷವಾದ ದೇವಸ್ಥಾನ ಶ್ರೀ ಉದ್ಭವ ರಾಮೇಶ್ವರ. ಈ ವಿಗ್ರಹವು ಪ್ರತಿಷ್ಠಾಪಿಸಿದ ವಿಗ್ರಹವಲ್ಲ ಭೂಮಿಯಿಂದ ಹುಟ್ಟಿದ ಈಶ್ವರ ಲಿಂಗ. ಬಹಳ ವಿಜೃಂಭಣೆಯಿಂದ ಉದ್ಭವ ರಾಮೇಶ್ವರದ ಜಾತ್ರೆಯನ್ನು ಮಾಡುತ್ತಾರೆ. ಯುಗಾದಿ ಹಬ್ಬದ ಸಮಯದಲ್ಲಿ ಆಚರಿಸುತ್ತಾರೆ. ಯುಗಾದಿಹಬ್ಬದ ಹಿಂದಿನ ದಿನ ಪ್ರಾರಂಭವಾಗುವ ಈ ಜಾತ್ರೆ ಎರಡು ಮೂರು ದಿನಗಳವರೆಗೆ ನಡೆಯುತ್ತದೆ. ಯುಗಾದಿಯ ಅಮಾವಾಸೆಯ ಹಿಂದಿನ ದಿನ ಊರಿನ ಬಲಿಕಲ್ಲುಗಳಿಗೆ ಅನ್ನ ಹಾಕಿ ರಥಕ್ಕೆ ಅನ್ನವನ್ನು ಹಾಕುತ್ತಾರೆ. ಅಂದಿನ ದಿನವೇ ಈಶ್ವರ ರಥವನ್ನು ನಿಡೂಡಿ ಗ್ರಾಮದ ಪಾರ್ವತಮ್ಮನ ದೇವಸ್ಥಾನಕ್ಕೆ ಮೆರಮರ್ತಿಯನ್ನು ಕಳುಹಿಸುತ್ತಾರೆ. ಆ ಗ್ರಾಮದಿಂದ ಬರುವಾಗ ಪಾರ್ವತಮ್ಮನು ಅಪ್ಪನ ಮನೆಯನ್ನು ಬಿಟ್ಟು ಬರಲಾರದೆ ಹಿಂದಕ್ಕೆ ಮುಂದಕ್ಕೆ ಹೋಗಿ ಮತ್ತೆ ಮತ್ತೆ ಬರುತ್ತದೆ. ಅಲ್ಲಿಂದ ತಂದ ಮೆರಮರ್ತಿ (ಅಡ್ಡೆ)ಯನ್ನು ರಥಕ್ಕೆ ಕೂರಿಸಿ ಯುಗಾದಿ ಹಬ್ಬದ ಮಾರನೆ ಬೆಳಗ್ಗೆ ರಥೋತ್ಸವವನ್ನು ಮಾಡುತ್ತಾರೆ. ಅವತ್ತಿನ ದಿನ ಕೆಂಡದ ಹೊಂಡಕ್ಕೆ ಹಸಿ ಹಸಿ ಸೌದೆಯನ್ನು ಹತ್ತಾರು ಟ್ರಾಕ್ಟರ್ ತಂದು ಬರಿ ಕರ್ಪೂರದಿಂದ ಕಚ್ಚಿ ಇಡೀ ದಿನ ರಾತ್ರಿ ಉರಿಸುತ್ತಾರೆ. ಆ ದಿನ ರಾತ್ರಿ ದೇವರ ಉತ್ಸವವಿರುತ್ತದೆ. ಚಾಮದೇವರು, ಡೊಳ್ಳು ಕುಣಿತ, ವೀರಗಾಸೆ

ಮುಂತಾದ ಜಾನಪದ ಕಲೆಗಳ ಕುಣಿತವಿರುತ್ತದೆ. ಹಿಂದಿನ ದಿನಗಳಲ್ಲಿ ನಾಟಕವನ್ನು ಮಾಡುತ್ತಿದ್ದರು. ಆದರೆ ಈಗ ಆರ್ಕ್ಯಾಸ್ಟ್ರಾವನ್ನು ಮನರಂಜನೆಗಾಗಿ ಹಾಡಿಸುತ್ತಾರೆ. ಕೊಂಡದ ಗುಂಡಿಯು ಮೊದಲು ಬೇರೆಯ ಸ್ಥಳದಲ್ಲಿ ಇತ್ತು. ಆ ಸ್ಥಳವು ಹಾಗೆ ಇದ್ದು ಅಲ್ಲಿಗೆ ಮರೆಮರ್ತಿ ಹೋಗಿ ಪೂಜೆ ಮಾಡಿಸಿಕೊಂಡು ಬರುತ್ತದೆ. ಹಿಂದಿನ ಕಾಲದಲ್ಲಿ ಸೇನಾಪಡೆಗೆ ಹೋದ ಗಂಡ ಎಷ್ಟುದಿನವಾದರೂ ಹಿಂದಕ್ಕೆ ಬರಲಿಲ್ಲವಂತೆ. ಆದರೆ ಹೆಂಡತಿ ಮುತ್ತೈದೆಯಾಗಿ ತಿರುಗುತ್ತಿದ್ದಾಳೆಂದು ಜನ ಹೀಯ್ಯಾಳಿಸುತ್ತಿದ್ದರಂತೆ. ಅದಕ್ಕೆ ಆ ಹೆಣ್ಣು ಮನನೊಂದು ಆ ಕೊಂಡದ ಗುಂಡಿಗೆ ಬಂದು ಹರಕೆ ಕಟ್ಟಿದ್ದಳಂತೆ. ಆದರೆ ಕೆಂಡದ ದಿನವೂ ಬರಲಿಲ್ಲವೆಂದು ಹೆಂಡತಿ ಕೆಂಡಕ್ಕೆ ಹಾರಿದಳಂತೆ. ಆದರೆ ವಿಧಿವಶ ಕುದುರೆಯ ಮೇಲೆ ಅಂದಿನ ಸಿಪಾಯಿಗಳನ್ನು ಕಳುಹಿಸಿಕೊಡುತ್ತಿದ್ದರಂತೆ. ಹೆಂಡತಿ ಸತ್ತ ಸ್ವಲ್ಪ ಸಮಯದ ನಂತರ ಕುದುರೆ ಸವಾರಿಯ ಮೇಲೆ ಗಂಡ ಬಂದನಂತೆ. ಸುದ್ದಿ ತಿಳಿದ ಗಂಡನು ತನ್ನ ಹೆಂಡತಿ ಸತ್ತಳೆಂದು ಕೊಂಡದ ಗುಂಡಿಗೆ ಕುದುರೆ ಸಮೇತವಾಗಿ ಹಾರಿದನಂತೆ. ಅಂದಿನ ದಿನದಿಂದ ದೇವಸ್ಥಾನದ ಹತ್ತಿರ ಕೆಂಡವಾದರೂ ಆ ಕೆಂಡದ ಗುಂಡಿಗೆ ಬಂದು ದೇವರು ಮೊದಲ ಮಂಗಳಾರತಿಯನ್ನು ಮಾಡಿಸಿಕೊಂಡು ಹೋಗುತ್ತದೆ ಎಂಬುದು ವಾಡಿಕೆ. ಮಾರನೆ ಬೆಳಗ್ಗೆ ಕೆಂಡ ಉತ್ಸವ ಎಲ್ಲವೂ ಮುಗಿಯುತ್ತದೆ.

'ಬಸವ ಜಯಂತಿ' ದಿನ ವಿಶೇಷವಾಗಿ ಪೂಜೆಯಾಗುವ ಬಸವಗುಡಿ ದೇವರ ಕಥೆಯು ಸೊಗಸಾಗಿದೆ. ನಿಡೂಡಿ ಗ್ರಾಮದ ಹೆಂಗಸರು ತನ್ನ ಎಮ್ಮೆ ಹಸುಗಳೆಲ್ಲ ಕರು ಹಾಕಿದರೆ ಗಿಣ್ಣು ತರುತ್ತೇನೆಂದು ಹೇಳಿ ಅರಕೆ ಹೊತ್ತಳಂತೆ. ಆಕೆಯ ಹಸು ಎಮ್ಮೆ, ಕರು ಹೀದರು ಅವಳು ಗಿಣ್ಣನ್ನು ತರಲಿಲ್ಲವಂತೆ. ಆದರೆ ಬಸವಣ್ಣ ದೇವರೂ ಆ ಹೆಂಗಸು ಗಿಣ್ಣು ತರುತ್ತಾಳೆಂದು ಆ ನಿಡೂಡಿ ಗ್ರಾಮದ ಕಡೆಗೆ ನೋಡುತ್ತಿದೆ.

ಒಟ್ಟಿನಲ್ಲಿ ದೊಡ್ಡಮರ ಗ್ರಾಮವೂ ನಗರ ಪ್ರದೇಶಕ್ಕೆ ಹತ್ತಿರ ಹೊಂದಿಕೊಂಡಂತೆ ಇದೆ. ಆ ಗ್ರಾಮದ ಸ್ವಲ್ಪ ಜಮೀನನ್ನು ನಗರದ ವಸತಿಗೆ ಪ್ರಾಧಿಕಾರ ಮಂಡಳಿಯು ಖರೀದಿಗೆ ತೆಗೆದುಕೊಂಡಿದೆ. ಕೂಲಿ ಕಾರ್ಮಿಕರಿಂದ ಜಮೀನ್ದಾರರವರೆಗೂ ಇರುವ ದೊಡ್ಡಮರ ಗ್ರಾಮದ ಜನರು ವ್ಯವಸಾಯವನ್ನು ಮುಖ್ಯ ಕಸುಬಾಗಿಸಿಕೊಂಡು ಜೀವನ ಸಾಗಿಸುವುದನ್ನು ಕಾಣಬಹುದು.

## ಅಧ್ಯಾಯ ೪

# ಗಾದೆಗಳ ಸಂದರ್ಭ

**ಸಾ**ಹಿತ್ಯವನ್ನು ನಾವು ಮುಖ್ಯವಾಗಿ ಜನಪದ ಸಾಹಿತ್ಯ ಮತ್ತು ಶಿಷ್ಟ ಸಾಹಿತ್ಯ ಎಂದು ವಿಂಗಡಿಸುತ್ತೇವೆ. ಜನಪದ ಸಾಹಿತ್ಯವು ಶಿಷ್ಟ ಸಾಹಿತ್ಯಕ್ಕೆ ತಾಯಿಬೇರು. ಶಿಷ್ಟ ಸಾಹಿತ್ಯವು ನಿರ್ದಿಷ್ಟ ಕರ್ತೃವಿನಿಂದ ರಚಿತವಾದುದು. ಶಿಷ್ಟ ಸಾಹಿತ್ಯದಲ್ಲಿ ಕೃತಿಕಾರ, ಕೃತಿಯ ಸಂದರ್ಭ, ಕೃತಿ ಮೂರು ಮುಖ್ಯವಾಗುತ್ತವೆ. ಆದರೆ ಜನಪದ ಸಾಹಿತ್ಯಕ್ಕೆ ನಿರ್ದಿಷ್ಟತೆ ಇಲ್ಲ. ಶಿಷ್ಟಸಾಹಿತ್ಯದಲ್ಲಿ, ಸಂದರ್ಭ ಅಷ್ಟೇನು ಮುಖ್ಯವೆನಿಸುವುದಿಲ್ಲ. ಆದರೆ ಜನಪದ ಸಾಹಿತ್ಯದಲ್ಲಿ ಸಂದರ್ಭಕ್ಕೆ ಬಹಳ ಬೆಲೆ ಇದೆ. ಆಯಾಯ ಸಂದರ್ಭದಲ್ಲಿ ಮಾತ್ರ ಬಳಸುತ್ತಾರೆ. ಬೇರೆ ಸಂದರ್ಭದಲ್ಲಿ ಅಸಂದರ್ಭವಾಗುತ್ತದೆ. ಉದಾಹರಣೆಗೆ ಜನಪದ ಗೀತೆಗಳನ್ನು ನಿರ್ದಿಷ್ಟ ವ್ಯಕ್ತಿಗಳು ಹಾಡಿದರೆ ಅದು ಸುಶ್ರಾವ್ಯ ಆಗಿರುತ್ತದೆ. ಸಂದರ್ಭೋಚಿತವಾಗಿ ಬೀಸುಕಲ್ಲಿನ ಹಾಡು, ನಾಟಿ ಹಾಡು, ಸಸಿಕೀಳುವ ಹಾಡು, ಸೋಬಾನೆ ಪದಗಳನ್ನು ಹೆಂಗಸರು ಹಾಡುತ್ತಾರೆ. ಜಕ್ಕಣಕ್ಕ ಪದಗಳನ್ನು ಮಕ್ಕಳು ಹಾಡುತ್ತಾರೆ. ವೀರಗೀತೆ, ಕಂಸಾಳೆ ಪದಗಳನ್ನು ಪುರುಷರೇ ಹಾಡುತ್ತಾರೆ. ಹೀಗೆ ಆಯಾಯ ನಿರ್ದಿಷ್ಟ ವ್ಯಕ್ತಿಗಳು ಹಾಡಿದರೆ ಅದು ಸಂದರ್ಭಕ್ಕೆ ಅನ್ವಯವಾಗುತ್ತದೆ. ಮಕ್ಕಳ ಪದಗಳನ್ನು ದೊಡ್ಡವರು ಹಾಡಿದರೆ, ಹೆಂಗಸರ ಪದಗಳನ್ನು ಗಂಡಸು ಹಾಡಿದರೆ ಆಭಾಸವಾಗುತ್ತದೆ. ಸಂದರ್ಭ ಸನ್ನಿವೇಶಕ್ಕೆ ಹೊಂದುವುದಿಲ್ಲ.

ಈವರೆಗೆ ಗಾದೆಗಳು ಪದ್ಯವಾಗಿ ಬಂದಿವೆ. ಪಠ್ಯದ ಗಾದೆಗಳ ಅರ್ಥವೇ ಬೇರೆ. ಯಾವುದೇ ಗಾದೆಯಾಗಲಿ ಅದನ್ನು ಯಾವ ಸಂದರ್ಭದಲ್ಲಿ ಬಳಸಬೇಕು ಎಂಬುದು ಗಮನಾರ್ಹ ಸಂಗತಿ. ಉದಾಹರಣೆಗೆ 'ಬೊಗೊಳೋ ನಾಯಿ ಕಚ್ಚಲ್ಲ". ಸಾಮಾನ್ಯ ಅರ್ಥದಲ್ಲಿ ಯಾವಾಗಲೂ ಬೊಗಳುತ್ತಿರುವ ನಾಯಿ ಕಚ್ಚುವುದಿಲ್ಲ ಎಂದು ಬಳಸುತ್ತೇವೆ. ಆದರೆ ಜನಪದೀಯ ಸಂದರ್ಭದಲ್ಲಿ ಜಗಳದ ಸಂದರ್ಭದಲ್ಲಿ ಬಳಸುತ್ತಾರೆ. ಯಾವಾಗಲೂ ಜಗಳಕ್ಕೆ ಬರುವವರು ಬರೀ ಬಾಯಿ ಮುಂದುಮಾಡಿ ಬೈಯ್ಯುತ್ತಾರೆ ಹೊರತು ಅವರು ಯಾವುದೇ ರೀತಿಯ ಘಾಸಿ ಮಾಡುವುದಿಲ್ಲ, ಹೊಡೆಯುವುದಿಲ್ಲ.

ಅದೇ ರೀತಿ 'ಸಸ್ಲಾಡಿ ಕೊರವನ ತಲೆಗೆ ತಂತು' ಎಂಬ ಗಾದೆಯಲ್ಲಿ ಸಸಿಲು ಜಾತಿಯ ಮೀನು. ಈ ಸಸಿಲು ಮೀನುಗಳು ನೀರಿನ ಮೇಲ್ಭಾಗದಲ್ಲಿ ದಡದ ಹತ್ತಿರ ಒಂದು ಆಟವಾಡುತ್ತಿರುತ್ತವೆ. ಮನುಷ್ಯ ಈ ಸಣ್ಣ ಮೀನು ಇದ್ದ ಕಡೆ ದಪ್ಪ ಮೀನು

ಇರುತ್ತವೆ ಎಂದು ಭಾವಿಸಿ, ಆ ದಪ್ಪ ಮೀನುಗಳನ್ನು ಹಿಡಿಯುತ್ತಾರೆ. ದಪ್ಪ ಮೀನಿನ ಪ್ರಾಣಕ್ಕೆ ಸಂಚಕಾರವನ್ನು ತರುತ್ತಾರೆ. ಆದರೆ ಇಲ್ಲಿನ ಸಂದರ್ಭವೇ ಬೇರೆ ಸಣ್ಣ ಮಕ್ಕಳು ಮಾಡದ ತಪ್ಪಿಗೆ ದೊಡ್ಡವರ ಮರ್ಯಾದೆಗೆ ಕುತ್ತು ಒದಗಿರುವುದನ್ನು ಸೂಚಿಸುತ್ತದೆ.

ಒಟ್ಟಿನಲ್ಲಿ ಗಾದೆಗಳಿಗೆ ಸಂದರ್ಭ ಬಹಳ ಮುಖ್ಯ. ಯಾವುದೇ ಗಾದೆಗೆ ಸಂದರ್ಭ ಸೂಚಿಸಿದಾಗ ಗಾದೆಗಳು ಅರ್ಥಗರ್ಭಿತವಾಗಿ ಬಳಕೆಯಾಗಿರುವುದಕ್ಕೆ ಸಾಕ್ಷಿಯಾಗುತ್ತವೆ. ಗಾದೆಗಳನ್ನು ಮಾತಿನ ಮಧ್ಯೆ ಬಳಸುವ ಪರಿಪಾಠವಿದೆ. ಗಾದೆಯು ಮಾತಿಗೆ ಬಿಗಿಯಾದ ಹಿಡಿತವನ್ನು ತಂದುಕೊಡುತ್ತವೆ. ಆಗ ಗಾದೆಯಿಂದ ಮಾತಿಗೆ ಹೆಚ್ಚು ನಿಖರತೆ ಮತ್ತು ಮೌಲ್ಯ ಸಿಗುತ್ತದೆ. ಗಾದೆಯನ್ನು ಮಾತಿನ ಮಧ್ಯೆ ಸಂದರ್ಭ ಸನ್ನಿವೇಶಗಳಿಗೆ ತಕ್ಕಂತೆ ಬಳಸುತ್ತಾರೆ.

**೧. "ಒಳ್ಳೆಯ ಗಂಡಾದ್ರೆ ಒಡವೆ ಯಾಕೆ? ಹೊಸ ರಾಗಿ ಹಿಟ್ಟು ಆದ್ರೆ ಹೆಸ್ರು ಯಾಕೆ?"**

ಒಳ್ಳೆಯ ಗಂಡ ಆಭರಣಕ್ಕೆ ಸಮಾನ ಎಂಬ ಅರ್ಥ. ಆದರೆ ನಿಜವಾದ ಅರ್ಥದಲ್ಲಿ ಒಂದು ಹೆಣ್ಣಿಗೆ ಅಮೂಲ್ಯಯುವ ಆಭರಣ ಗಂಡ. ಅವಳ ಗಂಡ ಒಳ್ಳೆಯ ಪತಿಯಾಗಿದ್ದರೆ ಮುತ್ತೈದೆಯ ಆಭರಣಗಳು ಇದ್ದ ಹಾಗೆ ಅಮೂಲ್ಯ ರತ್ನವಾಗುತ್ತಾನೆ. ಅಂದರೆ ಪತಿಯು ಸದ್ಗುಣ ಸಂಪನ್ನನು ಸಂಭಾವಿತನು ಆಗಿರಬೇಕು ಎಂದು ಬಯಸುತ್ತಾನೆ. ಅಂತಹ ಸನ್ನಡತೆಯ ಮನುಷ್ಯ ಒಂದು ಹೆಣ್ಣಿಗೆ ನಿಜವಾದ ಗಣಿಯ ಸಮಗ್ರ ಆಭರಣಕ್ಕೆ ಸಮ. ಮುತ್ತೈದೆಯ ಆಭರಣ ಕುಂಕುಮ, ಹೂವು, ಮೂಗುತಿ, ತಾಳಿ, ಬಳೆ, ಓಲೆ, ಕಾಲುಂಗುರ ಈ ಆಭರಣಗಳು ಒಂದು ಹೆಣ್ಣಿಗೆ ಗುಣ ಸಂಪನ್ನ ಮನುಷ್ಯನಿಂದ ಸಿಗಲು ಮಾತ್ರ ಸಾಧ್ಯ. ಆದರೆ ಇಂದಿನ ದಿನಗಳಲ್ಲಿ ವರದಕ್ಷಿಣೆ ಹೆಸರಿನಲ್ಲಿ ಗಂಡು ಮತ್ತು ಹೆಣ್ಣು ಇಬ್ಬರು ಪ್ರತಿಷ್ಠೆಗೆ ಬಳಸುವುದನ್ನು ಕಾಣಬಹುದು. ಒಂದು ಹೆಣ್ಣಿಗೆ ಒಂದು ಒಳ್ಳೆಯ ಗಂಡ ಸಿಕ್ಕಂತಹ ಸಂದರ್ಭದಲ್ಲಿ ಈ ಗಾದೆಯನ್ನು ಬಳಸುತ್ತಾರೆ.

ಹಾಗೆಯೇ ಪ್ರತೀಕವಾಗಿ ಹೊಸದಾಗಿ ಹಿಟ್ಟನ್ನು ಹೋಲಿಕೆಯಾಗಿ ಬಳಸಲಾಗಿದೆ. ಹೊಸದಾಗಿ ಬೆಳೆದ ರಾಗಿಯಿಂದ ಮಾಡಿದ ಹಿಟ್ಟು (ಮುದ್ದೆ) ಬಹಳ ರುಚಿಕರ. ಅಂತಹ ಸವಿಯಾದ ಮುದ್ದೆಗೆ ಹೆಸ್ರು, ಸಂಬಾರು ಪದಾರ್ಥ ಬೇಡ. ಸಂಬಾರು ಇಲ್ಲದೆ ಹೊಸ ರಾಗಿ ಮುದ್ದೆಯನ್ನು ಸವಿಯಲು ಮುದವಾಗಿರುತ್ತದೆ. ಹೊಸ ರಾಗಿಯ ಮುದ್ದೆಯಂತೆ ಒಳ್ಳೆಯ ಗಂಡ ಒಂದು ಹೆಣ್ಣಿನ ಸಾವಿರ ಸವರನ್‌ಗಳಿಗೆ ಸಮಾನ. ಆದರೆ ಕೆಟ್ಟ ಗಂಡನಾದರೆ ಎಷ್ಟೇ ಆಭರಣವಿದ್ದರೂ ತೃಣಕ್ಕೆ ಸಮಾನ.

೨. "ಸತ್ತ ಗಂಡ ಕನಸಿಗೆ ಬಂದ್ರೆ ಹಿಟ್ಟು ಇಕ್ಕಿ ಬಟ್ಟೆ ಕೊಡುತ್ತಾನಾ".

ಗಂಡ ಸತ್ತಾಗ ಚಿಂತೆಯಲ್ಲಿ ಕೊರಗುವ ಹೆಣ್ಣಿಗೆ ಈ 'ಮಾತನ್ನು ಬಳಸುತ್ತಾರೆ. ಇದು ಮೂದಲಿಕೆಯ ಮಾತಾಗಿದೆ. ಗಂಡ ಹೆಂಡತಿಯ ಸಂಬಂಧ ಹೇಳಲು ತೀರದ ಅನುಬಂಧ. ಅಂತಹ ಪತಿಯು ಮಡಿದಿರುವಾಗ ಅವನ ಒಡನಾಟ ಕನವರಿಕೆಯಲ್ಲಿ ನೆನೆದು ಚಿಂತಿಸುತ್ತಾಳೆ. ಆಗ ತನ್ನ ಸುತ್ತಲಿನವರು ಈ ಮಾತನ್ನು ಬಳಸುತ್ತಾರೆ. ಗಂಡ ಸತ್ತು ಶೂನ್ಯದ ವಾತಾವರಣ ನಿರ್ಮಾಣವಾಗಿದೆ. ವಾಸ್ತವವಾಗಿ ಜೀವನಕ್ಕೆ ಬೇಕಾದ ಆಹಾರ, ಬಟ್ಟೆಯನ್ನು ಪತಿಯು ಪತ್ನಿಗೆ ತಂದು ಕೊಡುವ ಜವಾಬ್ದಾರಿಯನ್ನು ಹೊಂದಿರುತ್ತಾನೆ. ಅಂತಹ ಗಂಡ ಸತ್ತಿದ್ದಾನೆ. ಅವನು ಕನಸಿನಲ್ಲಿ ಬರಬಹುದು. ಆದರೆ ಜೀವನ ನಿರ್ವಹಣೆಯನ್ನು ಹೊರಲಾರ ಎಂಬ ಧ್ವನಿ ಇಲ್ಲಿದೆ. ಅವನು ಅಶಾಶ್ವತವಾಗಿ ಬರದಿರುವಿಕೆ, ನೀನು ಧೈರ್ಯವನ್ನು ಪಡೆದುಕೊಳ್ಳಬೇಕು. ಆದರೆ ಇಂದಿನ ಸ್ಥಿತಿಯಲ್ಲಿ ಕೆಲವೊಂದು ಹೆಣ್ಣು ಗಂಡ ಸತ್ತಾಗ ಈ ಮಾತಿಗೆ ಬದ್ಧವಾಗಿ ಅವನ ಸ್ಮರಣೆಯಲ್ಲಿರುತ್ತಾರೆ. ಆದರೆ ಕೆಲವೊಂದು ಹೆಣ್ಣು ತಮ್ಮ ಮುಂದಿನ ಬದುಕಿನ ನಿರ್ವಹಣೆಗೆ ಮುಂದಾಗುತ್ತಾರೆ. ಆದರೆ ಇಲ್ಲಿ ಇನ್ನೊಂದು ಸಂಶಯಕ್ಕೆ ಈ ಗಾದೆಯನ್ನು ಬಳಸಬಹುದು. ಗಂಡ ಬದುಕಿದ್ದಾಗ ಹೆಂಡತಿಯನ್ನು ಊಟ ವಸತಿಯನ್ನು ನೀಡಿ ಜೀವನ ನಿರ್ವಹಣೆ ಮಾಡುತ್ತಿದ್ದಾನೆ ಎಂಬುದು. ಇದ್ದಾಗ ಸರಿಯಾಗಿ ನೋಡಿಕೊಳ್ಳುವ ಗಂಡ ಸತ್ತಮೇಲೆ ಬಂದು ಹೆಂಡತಿಯ ಕನಸಿನಲ್ಲಿ ಕುಶಲ ಕ್ಷೇಮವನ್ನು ವಿಚಾರಿಸುವುದು ಅನೌಚಿತವೇ ಸರಿ.

೩. "ಕ್ವಾ ಅನ್ನೋದು ಕುಲದಲ್ಲಿ ಇಲ್ಲಿ ತಾ ಅನ್ನೋದು ತಳದಲ್ಲಿ ಐತೆ."

ಮನುಷ್ಯ ದಾನ ಧರ್ಮಗಳನ್ನು ಮಾಡಿ ಪುಣ್ಯ ಸಂಪಾದನೆ ಮಾಡಬೇಕು ಇದು ಪ್ರತಿಯೊಬ್ಬನ ಕರ್ತವ್ಯ. ದಾನ ಮಾಡುವ ಮನುಷ್ಯ ಸದಾಸುಖಿಯಾಗಿರುತ್ತಾನೆ. ದಾನವನ್ನು ಮಾಡದಿರುವ ಸಂದರ್ಭದಲ್ಲಿ ಈ ಗಾದೆ ಮಾತನ್ನು ಬಳಸುತ್ತಾರೆ. ಕೊಡುವುದು ಮಾತ್ರ ಇಲ್ಲ, ತೆಗೆದುಕೊಳ್ಳುವುದು ಇದೆ ಎಂಬುವುದನ್ನು ತಿಳಿಸುತ್ತದೆ. ವ್ಯಕ್ತಿಯ ಜುಗ್ಗತನವನ್ನು ತಿಳಿಸುತ್ತದೆ. ದಾನ ಮಾಡುವ ಗುಣ ಮನುಷ್ಯನ ವಂಶ ಪಾರಂಪರ್ಯವಾಗಿರಬೇಕು. ಆದರೆ ಆ ಗುಣ ಇಡೀ ವಂಶದಲ್ಲಿ ಇಲ್ಲ. ಆದರೆ ಎಲ್ಲದು ಬೇಕು ಎನ್ನುವ ಇಡೀ ನಿಮ್ಮ ವಂಶದಲ್ಲಿ ಇದೆ ಅನ್ನುವುದನ್ನು ಸೂಚಿಸುತ್ತದೆ. ಇಂದಿನ ದಿನಗಳಲ್ಲಿ ಜುಗ್ಗತನವಿದೆ. ಕೊಲೆ, ಸುಲಿಗೆ ಮಾಡಿ ಗಳಿಸಿದ ಹಣ ಪಾಪ ಕರ್ಮ ನಿವಾರಣೆಗೆ ದಾನತ್ವ ರಾರಾಜಿಸುತ್ತಿದೆ. ಮನುಷ್ಯ ಅಂತಹ ಹುಟ್ಟಿದ ಮೇಲೆ ದಾನ

ಮಾಡಬೇಕು. ಕರ್ಣನಂತೆ ಅಲ್ಲದಿದ್ದರೆ ದಾನತ್ವಕ್ಕೆ ಅನುಗುಣವಾಗಿ ಸ್ವಲ್ಪವಾದರೂ ದಾನ ಮಾಡಬೇಕು ಕುಲದ ಮರ್ಯಾದೆಗಾದರೂ ದಾನ ಮಾಡಬೇಕು ಎಂಬುದನ್ನು ತಿಳಿಸುತ್ತದೆ.

**೪. "ಹೆತ್ತವರಿಗೆ ಹೆಗ್ಣಾನು ಮುದ್ದು"**

ಪ್ರೀತಿಸುವ ವಸ್ತು, ವ್ಯಕ್ತಿ, ಸ್ಥಳ ಯಾವುದೇ ಆಗಲಿ ಕುರೂಪವಾಗಿದ್ದರು ಚೆನ್ನಾಗಿಲ್ಲವೆಂದರೂ ಪ್ರಿಯವಾಗಿ ಆಪ್ಯಾಯಮಾನವಾಗಿ ಕಾಣಿಸುತ್ತವೆ. ಅದರಲ್ಲಿಯೂ ತನ್ನ ಅಂಗಾಂಶವಾಗಿ ಬಂದಿರುವ ಮಗು ಅಮೂಲ್ಯ, ಮಾಣಿಕ್ಯ. ತಾಯಿ ಹೆತ್ತ ಮಗು ಕುರೂಪಿ ಮಗುವಿಗೆ ಅಕ್ಕರೆಯನ್ನು ತೋರಿಸುವ ಸಂದರ್ಭದಲ್ಲಿ ಬಳಸುತ್ತಾರೆ. ತಾಯಿಗೆ ಮಗು ಕರ್‍ರಗೆ ಇರಲಿ ಹೇಗಿದ್ದರೂ ಪ್ರೀತಿಗೆ ಪಾತ್ರವಾಗುತ್ತದೆ. ಇಡೀ ಜಗತ್ತಿನಲ್ಲಿ ಪ್ರೀತಿಯ ಮುಂದೆ ವಿಕಾರ ರೂಪಗಳು ಪ್ರಿಯವಾಗುತ್ತದೆ. ಯಾವುದನ್ನೇ ಆಗಲಿ ಸೌಂದರ್ಯದಿಂದ ಅಳೆಯಬಾರದು, ಗುಣದಿಂದ ಪ್ರೀತಿಯಿಂದ ಅಳೆಯಬೇಕು ಎಂಬುದನ್ನು ಸೂಚಿಸುತ್ತದೆ. ಆಗ ಮಾತ್ರ ಚಿರಕಾಲ ಉಳಿಯಲು ಸಾಧ್ಯ ನಮ್ಮದು ಎನ್ನುವುದು. ನಾವು ಮೊದಲು ಒಪ್ಪಿಕೊಳ್ಳಬೇಕು. ವ್ಯಕ್ತಿ ಇಡೀ ಸಮಾಜಕ್ಕೆ ಬೇಡವಾಗಿರಬಹುದು ತನ್ನ ತಾಯಿಗೆ ಯಾವಾಗಲೂ ಬೇಕಾಗುವ ಮಗು. ಅದು ತಾಯಿಯ ನಿಜವಾದ ವಾತ್ಸಲ್ಯ.

**೫. "ಇಕ್ಕ ನಾರದ ಕೈ ಎಂಜಲು ಆಯಿತೆ ಮುಂದಕ್ಕೆ ಹೋಗ ಬಾ ದಾಸಪ್ಪ."**

ದಾನ ಮಾಡುವವರು ಯಾವ ರೀತಿಯಲ್ಲಿಯಾದರೂ ದಾನ ಮಾಡುತ್ತಾರೆ. ದಾನ ಮಾಡುವ ಮನಸ್ಸೇ ಇಲ್ಲ ಆದರೂ ದಾನ ಮಾಡುವ ಹಂಬಲಿಕೆಯನ್ನು ತೋರಿಸುತ್ತಾರೆ. ಅಂತಹ ಜನಗಳ ಹೀಯ್ಯಾಳಿಕೆಯಾಗಿ ಬಳಸುವ ಸಂದರ್ಭ. ದಾಸಪ್ಪ ಬಾಗಿಲ ಬಳಿ ಭಿಕ್ಷೆಯಾಚೆ ನಿಂತಿದ್ದಾನೆ. ಕೊಡಬೇಕಾದ ಮನೆಯ ಒಡತಿ. ನಾನು ಈಗ ಊಟ ಮಾಡುತ್ತಿದ್ದೇನೆ. ಅನಂತರ ಬಾ ನನ್ನ ಕೈ ಎಂಜಲು ಆಗಿದೆ ಎಂದಳಂತೆ. ಮೇಲು ನೋಟಕ್ಕೆ ಕೊಡಬೇಕು ಎನ್ನುವ ಮನಸ್ಸಿದೆ ಎನಿಸುತ್ತದೆ. ಆದರೆ ದಾನವನ್ನು ಕೊಡದ ಮನಸ್ಥಿತಿಯಲ್ಲಿ ಕಾಣಬಹುದು. ಸರಿಯಾದ ಸಮಯದಲ್ಲಿ ಸಹಾಯ ಮತ್ತು ದಾನ ಮಾಡಬೇಕು. ಎಲ್ಲದಕ್ಕೂ ಕೊಡುವ ಮನಸ್ಸು ಮುಖ್ಯ ಅನ್ನುವುದನ್ನು ಸೂಚಿಸುತ್ತದೆ.

**೬. "ಎಲ್ಲರ ಮನೆ ದೋಸೆನೂ ತೂತು ಆದರೆ ನಮ್ಮನೆ ತವಾನೇ ತೂತು"**

ಸಂಸಾರ ಎಂದ ಮೇಲೆ ಎಲ್ಲರ ಮನೆಯಲ್ಲಿ ಕಷ್ಟ ಸುಖಗಳು ಇರುತ್ತವೆ. ಸಾಂಸಾರಿಕ ಜಂಜಾಟದಲ್ಲಿ ಜೀವನದ ಏರುಪೇರಿನ ಸಮಯದಲ್ಲಿ ಇದನ್ನು ಬಳಸುತ್ತಾರೆ. ಸರ್ವೇಸಾಮಾನ್ಯವಾಗಿ ಎಲ್ಲರ ಮನೆಯಲ್ಲಿಯೂ ಒಂದಿಲ್ಲ ಒಂದು ಕಷ್ಟಗಳು ಇದ್ದೇ ಇರುತ್ತವೆ. ಹಾಗೆ ನೋಡಿದರೆ ಬೇರೆಯವರ ಮನೆಯ ಕಷ್ಟಕ್ಕಿಂತ ನಮ್ಮ ಮನೆಯ ಕಷ್ಟ

ಹೆಚ್ಚಾಗಿದೆ ಎನ್ನುವುದನ್ನು ಸೂಚಿಸುತ್ತದೆ. ರೂಪಕ ಪ್ರತೀಕವಾಗಿ ದೋಸೆ ಕಲ್ಲು ದೋಸೆಯನ್ನು ಬಳಸಲಾಗಿದೆ. ಸಾಮಾನ್ಯವಾಗಿ ದೋಸೆಯಲ್ಲಿ ತೂರು ಇರುತ್ತವೆ ಆದರೆ ತವಾನೆ (ದೋಸೆಯ ಕಲ್ಲು) ತೂತು ಆದರೆ ದೋಸೆ ಮಾಡಲು ಸಾಧ್ಯವಿಲ್ಲ. ತನ್ನ ಮನೆಯ ಕಷ್ಟ ಸಂಕಟಗಳು ಎಷ್ಟು ಭಯಾನಕ ಹಾಗೆ ನೋಡಿದರೆ ಬದುಕಿನ ಕಷ್ಟಗಳಿಗೆ ಅವರೇ ಜವಾಬ್ದಾರರು ಎಂಬುದನ್ನು ಸೂಚಿಸುತ್ತದೆ.

**೭. "ಎತ್ತು ಏರಿಗೆ ಎಳೆದರೆ ಕ್ವಾಣ (ಕೋಣ) ನೀರಿಗೆ ಎಳಿತಂತೆ"**

'ಹೊಂದಾಣಿಕೆ' ಎನ್ನುವುದು ಬಹಳ ಮುಖ್ಯ ಎನ್ನುವ ಸಂದರ್ಭದಲ್ಲಿ ಬಳಸುತ್ತಾರೆ. ಪರಸ್ಪರರ ಜೊತೆ ಅಭಿರುಚಿ, ಆಶೆ, ಆಕಾಂಕ್ಷೆಗಳನ್ನು ಹೊಂದಾಣಿಕೆ ಮಾಡಿಕೊಳ್ಳಬೇಕು. ಒಂದೇ ಮನಸ್ಸು ಇದ್ದಾಗ ಮಾತ್ರ ಸಾಧ್ಯ. ಭಾವನೆಗಳು ಇಬ್ಬರ ಮನಸ್ಸಿನಲ್ಲಿ ಒಂದೇ ಆಗಿರಬೇಕೆಂದು ಹೇಳುತ್ತದೆ. ಇದನ್ನು ಸಾಮಾನ್ಯವಾಗಿ ಗಂಡ ಹೆಂಡತಿಯ ಸಾಂಸಾರಿಕ ಜೀವನದ ಸಂದರ್ಭದಲ್ಲಿ ಬಳಸುತ್ತಾರೆ. ಮನಸ್ಸಿನ ಎರಡು ಪ್ರತೀಕಗಳಾಗಿ ಮತ್ತು ಕೋಣಗಳನ್ನು ಬಳಸಿದ್ದಾರೆ. ಕೋಣಕ್ಕೆ ಯಾವಾಗಲೂ ನೀರಿನಲ್ಲಿ ಇರುವ ಆಸೆ. ಆದರೆ ಎತ್ತಿಗೆ ನೀರಿನಲ್ಲಿರುವುದು ಇಷ್ಟವಿಲ್ಲ. ಇವೆರಡನ್ನು ಒಂದು ಗಾಡಿಗೆ ಹೂಡಿದಾಗ ಎರಡು ಒಂದೊಂದು ಕಡೆಗೆ ಎಳೆಯುತ್ತವೆ. ಆಗ ಬಂಡಿ ಚಕ್ರ ತೂಯ್ದಾಡುವ ಸ್ಥಿತಿ ಉಂಟಾಗುತ್ತದೆ. ಅದೇ ಸಂಸಾರ ಎಂಬ ಚಕ್ರ ನಡೆಸಲು ಹೆಣ್ಣು ಗಂಡು ಎರಡೂ ಹೊಂದಾಣಿಕೆಯಿಂದ ಇರಬೇಕು. ಆಗ ಸುಖೀ ಸಂಸಾರ ಆಗಲು ಸಾಧ್ಯ.

**೮. "ಸತ್ತವರ ಮನೆಯಿಂದ ಇದ್ದವರು ಬಾಚಿಕೊಂಡರಂತೆ"**

ಮನುಷ್ಯ ತಾನು ಬದುಕಬೇಕು ಎಂಬ ಹಂಬಲಿಕೆಯಿಂದ ಬೇರೆಯವರ ವಸ್ತುಗಳಿಗೆ ಆಸೆ ಪಡುತ್ತಾನೆ. ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬ ಮನುಷ್ಯನಿಗೆ ಈ ಆಸೆ, ದುರಾಸೆಗಳು ಸಹಜ. ಸಾವಿನಿಂದ ದುಃಖತಪ್ತವಾಗಿರುವ ಮನೆಗೆ ನೆರೆಹೊರೆಯವರು ಸಹಾಯ ಮಾಡಬೇಕು. ಅವರು ಇಲ್ಲದ ಸಮಯ ನೋಡಿ ಮನೆ ವಸ್ತು ತೋಚುವ ನೀಚ ಮನುಷ್ಯರಿಗೆ ಹೇಳುವವರು ಯಾರು? ಅಂತಹ ಸಮಯದಲ್ಲಿ ಈ ಗಾದೆಯನ್ನು ಬಳಸುತ್ತಾರೆ. ದುಃಖದ ಸಮಯದಲ್ಲಿ ಒಬ್ಬನಿಗೆ ಒಬ್ಬನು ನೆರವಾಗುವವನೇ ನಿಜವಾದ ಮನುಷ್ಯ. ಮನುಷ್ಯನಿಗೆ ಸಾವು ಖಚಿತ ಅವನು ಇರುವವರೆಗೆ ಮಾತ್ರ ಭೂಮಿಯ ವಸ್ತುಗಳಿಗೆ ಮಾಲಿಕ ಒಡೆಯ. ಸತ್ತ ಮರುಗಳಿಗೆಯಿಂದ ಬೇರೆಯವರ ಸ್ವತ್ತಾಗುತ್ತವೆ. ಸಂಪೂರ್ಣವಾಗಿ ಒಂದು ಕುಟುಂಬ

ನಾಶವಾದಾಗ ಆ ಮನೆಯಲ್ಲಿ ಮನುಷ್ಯ ಪ್ರಾಣಿಗಳಿಗಿಂತ ಇದ್ದ ಆಸ್ತಿಪಾಸ್ತಿಗೆ ಬೇಡಿಕೆ ಹೆಚ್ಚಾದುದು ಧ್ವನಿತ. ಜೀವ ಮುಖ್ಯವೇ ಹೊರತು ಸಂಪತ್ತಲ್ಲ.

**೯. "ಸೋರ ಮನೆ ಬೇಡ ಹೋರಾಡದೆ ಇರುವ ಗಂಡಬೇಡ."**

ಸ್ತ್ರೀ ಸಹಜವಾದ ಬಯಕೆಗಳು ಇಲ್ಲಿ ಎದ್ದು ಕಾಣುತ್ತದೆ. ಹೆಣ್ಣು ತನ್ನ ಗಂಡ ಧೈರ್ಯವಂತ ಮತ್ತು ಬಲಶಾಲಿಯಾಗಿರಬೇಕು ಎನ್ನುವ ಸಂದರ್ಭದಲ್ಲಿ ಈ ಗಾದೆಯನ್ನು ಬಳಸುತ್ತಾರೆ. ಗಂಡ ಛಲವಾದಿಯಾಗಿರಬೇಕು. ಇಲ್ಲವಾದರೆ ಸಂಸಾರ ಜವಾಬ್ದಾರಿ ಕಷ್ಟ ಎಂಬುದನ್ನು ಹೇಳುತ್ತದೆ. ಗಂಡ ಜವಾಬ್ದಾರಿ ಮನುಷ್ಯನಾಗಿದ್ದರೆ ಸೋರುವ ಮನೆಯನ್ನು ರಿಪೇರಿ ಮಾಡುತ್ತಿದ್ದನು. ಆದರೆ ಗಂಡಸು ಅದರ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. ಗಂಡನು ತನ್ನ ಸಂಸಾರಕ್ಕೆ ಜೀವ ವಹಿಸುವವನಾಗಬೇಕು. ಸಂಸಾರದ ನೌಕೆಯನ್ನು ನಡೆಸಲು ಸಮರ್ಥನಲ್ಲದಿರುವ ಗಂಡಬೇಡ ಎಂಬುದನ್ನು ಹೇಳುತ್ತದೆ. ಗಂಡಿಗೆ ಪೌರುಷ ಅಗತ್ಯ ಹಾಗೆ ಮನೆಯ ಭದ್ರತೆಯೂ ಮುಖ್ಯ.

**೧೦. "ಮಾಡುವುದು ಅನಾಚಾರ ಮನೆ ಮುಂದೆ ಬೃಂದಾವನ."**

ಮನುಷ್ಯನ ದುರ್ವರ್ತನೆ, ದುರಾಚಾರ, ಕಠೋರತೆಯನ್ನು ಹೇಳುವ ಸಂದರ್ಭದಲ್ಲಿ ಮನುಷ್ಯ ಕೊಲೆ, ಸುಲಿಗೆ, ಮೋಸ, ಧಗಾ ಮುಂತಾದ ಕೆಟ್ಟ ಕೆಲಸಗಳನ್ನು ಮಾಡುತ್ತಾ ಹಣ ಸಂಪಾದನೆ ಮಾಡುತ್ತಾನೆ. ಅಂತಹ ಕೆಟ್ಟ ಕೆಲಸ ಮಾಡಿ ತಾನು ಸಭ್ಯಸ್ಥನೆಂದು ತೋರಿಕೆಯ ಜೀವನವನ್ನು ಮಾಡುತ್ತಾನೆ. ದುಷ್ಕೃತ್ಯಗಳಿಂದ ಬಂದ ಹಣದಿಂದ ತನ್ನ ಮನೆಯ ಮುಂದೆ ಬೃಂದಾವನವನ್ನು ಸೃಷ್ಟಿಸಿಕೊಂಡಿದ್ದಾನೆ. ಈ ಒಳಗೊಂದು ಹೊರಗೊಂದು ಇರಬಾರದು ಎಂಬುದನ್ನು ಗಾದೆ ಹೇಳುತ್ತದೆ. ವ್ಯಕ್ತಿ ಕೆಟ್ಟ ಕೆಲಸಗಳನ್ನು ಮಾಡಿ ಆದರೆ ಎಲ್ಲರೆದುರಿಗೆ ತಾನು ಉನ್ನತ ಆದರ್ಶ ವ್ಯಕ್ತಿಯೆಂದು ಅಭಿನಯ ಮಾಡುತ್ತಾನೆ. ಮಾಡುವ ಕೆಲಸ ಕೆಟ್ಟದ್ದು ಆದರೆ ಜೀವನ ನಡೆಸುವ ಶೈಲಿ ಆಡಂಬರದ್ದು. ನುಡಿದಂತೆ ನಡೆಯಬೇಕು.

**೧೧. "ಆ ಮಳ್ಳಿ ಈ ಮಳ್ಳಿ ಯಾರು ಕರದ್ರು ಹೋಗ ಮಳ್ಳಿ".**

ಕರೆದರೂ ಬರದಿರುವ ಸಂದರ್ಭದಲ್ಲಿ ಬಳಸುತ್ತಾರೆ. ಮಳ್ಳಿ ಎಂದರೆ ಒಳಗೆ ಲೆಕ್ಕಾಚಾರ ಹಾಕುವ ಬುದ್ದಿಯವರು. ಬಾ ಇಲ್ಲಿ ಅಂತಹ ಕರೆದರೆ ಅದು ಇದು ನೆವಗಳನ್ನು ಹೇಳಿ ಬರುವುದಿಲ್ಲ ಎಂದು ಹೇಳುತ್ತಾರೆ. ಆ ಸಂದರ್ಭ ಈ ಮಾತು ಒಳಗೊಂಡಿದೆ. ಆಗ ಕರೆಯುವವರು ಕರೆದಿಲ್ಲವೆಂದು ತಿರಸ್ಕಾರವನ್ನು ಹೇಳುತ್ತಾರೆ. ಅದು ದು ಕೆಲಸವಿದೆ ಎಂದು ಸುಳ್ಳು ಹೇಳುವ ಪರಿಪಾಠವಿದೆ. ಕುಂಟು ನೆವದಿಂದ ತಿರಸ್ಕಾರಕ್ಕೆ ಗುರಿಯಾಗುವುದು.

**೧೨. "ಮುಳ್ಳನ್ನು ಮುಳ್ಳಿನಿಂದಲೇ ತೆಗಿಯಬೇಕು."**

ದ್ವೇಷವನ್ನು ದ್ವೇಷದಿಂದ, ಕೋಪವನ್ನು ಕೋಪದಿಂದಲೇ ಶಮನ ಮಾಡಬೇಕು ಎನ್ನುವುದನ್ನು ಸೂಚಿಸುತ್ತದೆ. ಆದರೆ ಈ ಮಾತಿನ ಅರ್ಥ ಜಾಣ್ಮೆಯಿಂದ ಕೆಲಸ ಕಾರ್ಯವನ್ನು ಮಾಡಿಕೊಳ್ಳಬೇಕು ಎಂದು ಸಾರುತ್ತದೆ. ಹಮ್ಮುರಬಿ ಶಾಸನ ಕೈಗೆ ಕೈಯನ್ನ ಕಾಲ್ಗೆ ಕಾಲನ್ನ ತೆಗೆಯಬೇಕು' ಎನ್ನುವಂತೆ ಈ ಮಾತು ಬಳಸುವಂತೆ ಕುಟಿಲತ್ವದಿಂದ ಸೇಡನ್ನು ತೀರಿಸಕೊಳ್ಳಬೇಕು ಅನ್ನುವುದನ್ನು ಹೇಳುತ್ತದೆ.

**೧೩. "ಸಂತೆಯಲ್ಲಿ ಅವ್ವನು ನೋಡು ಮನೆಗೆ ಹೋಗಿ ಮಗಳ ನೋಡು."**

ಸಂತೆಗೆ ಬಂದಾಗ ಅವ್ವ ಶೃಂಗಾರ ಮಾಡಿಕೊಂಡು ಬಂದಿದ್ದಾಳಾ ನೋಡು ಮನೆಯಲ್ಲಿ ಇರುವ ಮಗಳನ್ನ ನೋಡು ಅಂತ ಗಂಡಿಗೆ ಹೇಳಿದರಂತೆ. ಕಾರಣ ಹಿಂದಿನವರು ಸಂತೆಗೆ ಹೋಗುವಾಗ ಶೃಂಗಾರ ಮಾಡಿಕೊಳ್ಳುತ್ತಿರಲಿಲ್ಲವಂತೆ. ಸಂತೆಗೆ ಅವ್ವ ಚೆನ್ನಾಗಿ ಬಂದಿದ್ದರೆ ಮನೆಯಲ್ಲಿರುವ ಮಗಳು ಸುಂದರವಾಗಿ ಸ್ವಚ್ಛವಾಗಿ ಇರುತ್ತಾಳೆ ಎಂಬ ಸಂದರ್ಭದಲ್ಲಿ ಬಳಸುತ್ತಾರೆ.

**೧೪. " ನೆವ ಇಲ್ಲದೆ ಜವರಾಯ ತಗತಾನ"**

ಸಾವು ಸಂಭವಿಸಿದಾಗ ದುಃಖಮಯವಾದ ಪರಿಸ್ಥಿತಿಯಲ್ಲಿ ಬಳಸುತ್ತಾರೆ. ಮನುಷ್ಯನಾಗಿ ಹುಟ್ಟಿದ ಮೇಲೆ ಪ್ರತಿಯೊಬ್ಬ ಮನುಷ್ಯನು ಸಾಯುತ್ತಾನೆ. ಇದು ಸೃಷ್ಟಿಯ ನಿಯಮ. ಸಾವಿಗೂ ಒಬ್ಬ ಯಜಮಾನ ಇದ್ದಾನೆ ಅವನು ಜವರಾಯ (ಯಮಧೂತ). ಸಾಯುವುದಕ್ಕೆ ಒಂದಲ್ಲ ಒಂದು ಕಾರಣಗಳು ಇರುತ್ತವೆ. ಕಾರಣಗಳು ಇಲ್ಲದೆ ಜವರಾಯ ಮನುಷ್ಯನನ್ನು ಸಾಯಿಸುವುದಿಲ್ಲ. ಸಾವು ಆಕಸ್ಮಿಕವಾಗಿದೆ. ಅದು ಯಾವ ರೂಪದಲ್ಲಿಯಾದರೂ ಬರುತ್ತದೆ. ಹಿಂದಿನ ಕಾಲದಲ್ಲಿ ಪ್ಲೇಗು, ಕಾಲರ ಮುಂತಾದ ರೋಗಗಳಿಗೆ ತುತ್ತಾದರೆ ಇಂದಿನ ಕಾಲದಲ್ಲಿ ಏಡ್ಸ್, ಕ್ಯಾನ್ಸರ್, ಹೃದಯಾಘಾತ, ಆಕ್ಸಿಡೆಂಟ್ ಮುಂತಾದ ಕಾರಣಗಳಿಂದ ಸಾಯುವುದನ್ನು ಕಾಣಬಹುದು.

**೧೫. "ಕಾಸಿದ್ದವನು ಕೈಲಾಸಕ್ಕೆ ಹೋದರೆ ನೀನ್ ಎಲ್ಲಿಗೆ ಹೋತಿಯೋ ಮುರ್ಕಾಟಿ."**

ಕಾಸು (ಹಣ) ಇರುವವನು ಪ್ರಪಂಚದ ಯಾವುದೇ ಸ್ಥಳಕ್ಕಾದರೂ ಹೋಗಬಹುದು. ಅಂತಹ ಮನುಷ್ಯ ತನ್ನ ಹಣದಿಂದ ಸ್ವರ್ಗಕ್ಕೆ (ಕೈಲಾಸ) ಹೋಗಬಹುದು. ಕಾಸು ಇಲ್ಲದ ಬಡವ ತನ್ನ ಹತ್ತಿರ ಹಣವೇ ಇಲ್ಲ ನಾನು ಅವನ ಹಾಗೆ ಕೈಲಾಸಕ್ಕೆ ಹೋಗುತ್ತೇನೆ ಎಂದಾಗ ತನ್ನವರು ಹೇಳುವ ಮಾತು. ನಿನಗೆ ಕಾಸು

ಇಲ್ಲ ಆದ್ದರಿಂದ ಯಾವುದೇ ಊರಿಗೆ ಪ್ರಯಾಣ ಬೆಳೆಸಲು ಸಾಧ್ಯವಿಲ್ಲ ಎಂದು ತಿಳಿಸುತ್ತದೆ. ಹಣವೇ ಮುಖ್ಯ ಹಣವಿದ್ದರೆ ಕೈಲಾಸವನ್ನು ನೋಡಬಹುದು. ಪರಮ ಸುಖವನ್ನು ಅನುಭವಿಸಬಹುದು. ಹಣವಿಲ್ಲದವನು ತಾನು ಇರುವ ಸ್ಥಳದಲ್ಲಿ ಇರಬೇಕು. ಇಲ್ಲಿ ಕೊಟ್ಟಿರುವ ಮುರ್ಕಾಟಿ (ಆಮೆ) ಹಾಗೆ ಇರುವ ಪ್ರಪಂಚವನ್ನೇ ಕೈಲಾಸ ಎಂದು ಭಾವಿಸಬೇಕು. ಇರುವುದರಲ್ಲಿಯೇ ತೃಪ್ತಿಪಡಬೇಕು ಅತಿಯಾಸೆ ಪಡಬಾರದು ಎಂಬುದನ್ನು ಸೂಚಿಸುತ್ತದೆ.

**೧೬. "ಕಂಡದ್ದನ್ನ ಕಂಡಂಗೆ ಹೇಳಿದರೆ ಕೆಂಡದಂತಹ ಕೋಪ."**

ಸತ್ಯವನ್ನು ಹೇಳಲು ಅಂಜಬಾರದು ಎಂದು ಹೇಳುತ್ತದೆ. ಸತ್ಯವೆಂಬುದು ಅಲಗಿನ ಮೊನೆಯ ಹಾಗೆ. ಸತ್ಯವನ್ನು ಹೇಳುವವರಿಗೆ ಯಾವಾಗಲೂ ಪರೀಕ್ಷೆ ನಡೆಯುತ್ತಿರುತ್ತದೆ. ಇರುವ ಸತ್ಯವನ್ನು ಎದುರಿಗೆ ಹೇಳಿದರೆ ಕೆಂಡ ಜ್ವಲಿಸುವ ಹಾಗೆ ಬೇರೆಯವರಿಗೆ ಸಿಟ್ಟು ಬರುತ್ತದೆ. ವ್ಯಕ್ತಿ ಮಾಡಿದ ತಪ್ಪನ್ನು ಬೇರೆ ವ್ಯಕ್ತಿ ಆ ತಪ್ಪನ್ನು ತೋರಿಸುತ್ತಾನೆ. ಆಗ ಆ ವ್ಯಕ್ತಿಗೆ ಕೋಪ ಬರುತ್ತದೆ. ಆ ಸಂದರ್ಭದಲ್ಲಿ ಬಳಸುತ್ತಾರೆ. ಸತ್ಯವನ್ನು ಹೇಳುವವರಿಗೆ ಎದೆಗಾರಿಕೆ ಇರಬೇಕು.

**೧೭. "ಹೀನ್ ಸುಳಿ ಬೋಳಿಸಿದರು ಹೋಗಲ್ಲ".**

ವ್ಯಕ್ತಿಯ ಸ್ವಭಾವಗಳನ್ನು ತಿಳಿಸುವಲ್ಲಿ ಬಳಸುತ್ತಾರೆ. ಕೆಟ್ಟ ಮನುಷ್ಯನ ಗುಣಗಳು ಹುಟ್ಟಿನಿಂದ ಬಂದಿದ್ದರೆ, ಅವನ ಜೀವಿತದ ಕೊನೆಯವರೆಗೆ ಹೋಗುವುದಿಲ್ಲ. ಮನುಷ್ಯನ ತಲೆಯಲ್ಲಿ ಒಳ್ಳೆಯ ಸುಳಿ ಕೆಟ್ಟ ಸುಳಿ ಎಂದು ಎರಡು ಸುಳಿ ಇರುತ್ತವೆ. ಒಳ್ಳೆಯ ಸುಳಿ ಇದ್ದರೆ ಪರವಾಗಿಲ್ಲ ಹೀನ್ ಸುಳಿ ಬಂದರೆ ಕೆಡುಕು ಎಂದು ಭಾವಿಸುತ್ತಾರೆ. ಆ ಸುಳಿ ಬೋಳಿಸಿದರೂ ಹೋಗುವುದಿಲ್ಲ. ಕೂದಲು ಹುಟ್ಟಿದಾಗ ಮತ್ತೆ ಹುಟ್ಟುತ್ತದೆ ಅದುಎಷ್ಟೇ ಸಾರಿ ಬೋಳಿಸಿದರೂ ಮತ್ತೆ ಮತ್ತೆ ಬರುತ್ತಿರುತ್ತದೆ. ಗುಣ ಸ್ವಭಾವಗಳು ಮನುಷ್ಯನ ಹುಟ್ಟುಗುಣಗಳು.

**೧೮. "ಪರರ ಬಸ್ತು ಪಾಷಾಣ"**

ಬೇರೆಯವರ ಹತ್ತಿರ ಇರುವ ಆಸ್ತಿ, ಆಭರಣ, ಬಟ್ಟೆ ಯಾವುದೇ ಆಗಲಿ ವಿಷಕ್ಕೆ ಸಮಾನ. ಮನುಷ್ಯನಿಗೆ ಆಸೆ ಜಾಸ್ತಿ. ಹಾಗೆಯೇ ಮನುಷ್ಯನಿಗೆ ತನ್ನ ವಸ್ತುಗಳಿಗಿಂತ ಬೇರೆಯವರ ವಸ್ತುಗಳು ಹೆಚ್ಚು ಸುಂದರವಾಗಿ ಕಾಣಿಸುತ್ತದೆ. ಅಂತಹ ವಸ್ತುಗಳು ತನ್ನದಾಗಬೇಕೆಂದು ಬಯಸುತ್ತಾನೆ. ಆ ವಸ್ತುಗಳನ್ನು ಬಯಸುವುದು ತಪ್ಪು. ಪಾಲಿಗೆ ಬಂದಿದ್ದು ಪಂಚಾಮೃತ. ನಮಗೆ ಲಭಿಸಿದರಲ್ಲಿ ಆತ್ಮತೃಪ್ತಿ, ಸಂತೃಪ್ತಿ ಹೊಂದಬೇಕೆಂದು ಈ ಆಶಯದ ಕಿಡಿನುಡಿ.

### ೧೯. "ತೊಟ್ಲನೂ ತೂಗುತ್ತಾನೆ ತಿಗನು ಚಿಂಟುತ್ತಾನೆ."

ವ್ಯಕ್ತಿ ಒಂದು ಕಡೆ ಜಗಳವನ್ನು ನಿಲ್ಲಿಸುತ್ತಾನೆ, ಮತ್ತೊಂದು ಕಡೆ ಆ ಜಗಳವನ್ನು ಶುರುಮಾಡುತ್ತಾನೆ. ಇದು ಎರಡು ತಲೆ ನಾಗರ ಹಾವಿನ ಹಾಗೆ. ಮನುಷ್ಯನ ಸ್ವಭಾವಗಳು ವಿಚಿತ್ರ, ಮನೋ ಖಿನ್ನತೆ ವಿಚಿತ್ರ, ಸ್ವಭಾವಗಳಿಗೆ ಕಾರಣ ಇಂತಹ ಸ್ವಭಾವಗಳು ಮನುಷ್ಯನಿಗೆ ಸಂತೋಷವನ್ನು ನೀಡಬಹುದು. ಇಲ್ಲವೇ ದುಃಖವನ್ನು ನೀಡಬಹುದು. ಮಗುವಿನ ಸಂತೈಯಿಕೆ ಸಮಯದಲ್ಲಿ ತೊಟ್ಟಿಲನ್ನು ತೂಗಿ ಮಗುವನ್ನು ಸುಮ್ಮನಿರಿಸುತ್ತಾನೆ. ಮತ್ತೇ ಅದೇ ಮಗುವಿನ ತಿಗವನ್ನು ಚಿಂಟುತ್ತಾನೆ. ಇದರಿಂದ ಮಗು ಮತ್ತೆ ಅಳುತ್ತದೆ. ಸಮಾಧಾನ ಮತ್ತು ಕೆಣಕುವಿಕೆ ಒಂದೇ ಕಾಲದಲ್ಲಿ ನಡೆಯುತ್ತದೆ. ಈ ಗಾದೆಯ ಒಂದು ಕಡೆ ಹಾಸ್ಯ, ಕೋಪವನ್ನು ಪ್ರತಿಬಿಂಬಿಸಿದರೆ, ಮತ್ತೊಂದು ಕಡೆ ಗಂಭೀರತರವಾದ ಮಾನವನ ಮನಸ್ಸಿನ ಖಿನ್ನತೆಗಳನ್ನು ತಿಳಿಸುತ್ತದೆ.

### ೨೦. "ಅರಮನೆ ಇಲ್ಲದಿದ್ದರ‍್ರು ಇರಬಹುದು ಆದರೆ ನೆರೆಮನೆ ಇಲ್ಲದನೇ ಇರದಿಕ್ಕಾಗಲ್ಲ"

ನೆರೆಹೊರೆಯ ಬಾಂಧವ್ಯ ತುಂಬಾ ಮುಖ್ಯ ಎಂದು ಸಾರುತ್ತದೆ. ಕಷ್ಟ ಸುಖ ದುಃಖ ನೋವು ನಲಿವುಗಳುಗಳಿಗೆ ನೆರೆ ಹೊರೆಯವರು ತುಂಬಾ ಅವಶ್ಯಕ. ಹಳ್ಳಿಗಾಡಿನ ಜನ ಉತ್ತಮ ನೆರೆಹೊರೆಯ ಬಾಂಧವ್ಯ ಇರಬೇಕು ಎಂದು ಬಯಸುತ್ತಿದ್ದರು. ಇದರಿಂದ ಕೊಳು ಕೊಡುಗೆ ಮಾಡಿಕೊಳ್ಳುತ್ತಿದ್ದರೆ. ತನ್ನ ಮನೆಯಲ್ಲಿ ಜೀರಿಗೆ, ಉಪ್ಪು, ಬೆಳ್ಳುಳ್ಳಿ ಯಾವುದೇ ಖಾಲಿಯಾದ್ದರು ನೆರೆಹೊರೆಯವರ ಹತ್ತಿರ ತಂದು ಅಡುಗೆ ಮಾಡುತ್ತಾರೆ. ಅದು ಹಳ್ಳಿಯ ಸಾಮರಸ್ಯವನ್ನು ತೋರುತ್ತವೆ. ಇಂತಹ ನೆರೆಹೊರೆಯ ಸಂಬಂಧಕ್ಕೆ ಅರಮನೆ ಬೇಡ. ಸರ್ವ ಸಾಧಾರಣವಾದ ನೆರೆಮನೆ ಸಾಕು. ಇಂದಿನ ದಿನಗಳಲ್ಲಿ ನಗರಗಳಲ್ಲಿ ಪಕ್ಕದ ಮನೆಯವರು ಯಾರು ಎಂಬ ಸಂಬಂಧವಿಲ್ಲದಂತೆ ಬದುಕುತ್ತಿದ್ದಾರೆ.

### ೨೧. "ಒಬ್ಬನಿಗೆ ಹೆಂಡ್ತಿಯಾಗಿ ಒಮ್ಮಕ ಗರತಿ ಆಗು"

ಅತ್ತೆ ಸೊಸೆಯನ್ನು ಬೈಯ್ಯುವಾಗ ಈ ಮಾತನ್ನು ಬಳಸುತ್ತಾರೆ. ಹೀಯ್ಯಾಳಿಕೆಯ ಅತ್ತೆಯು ಸೊಸೆಯ ವರ್ತನೆಗಳು ಒಂದು ನೂಲಿನಷ್ಟು ಅಸ್ತವ್ಯಸ್ತವಾದರೂ ಮೂದಲಿಕೆ ತಪ್ಪುವುದಿಲ್ಲ. ತನ್ನ ಸೊಸೆ ಯಾರೋ ಬೇರೆ ಗಂಡಸರ ಜೊತೆ ಮಾತಾಡುತ್ತಿರಬೇಕು. ಅಂತಹ ಸಂದರ್ಭದಲ್ಲಿ ಒಂದು ಹೆಣ್ಣು ಸಂಪೂರ್ಣವಾಗಿ ಒಂದು ಗಂಡಿಗೆ ಸೀಮಿತವಾಗಿರಬೇಕು. ಹಾಗೆ ಇದ್ದಾಗ ಮಾತ್ರ

ಹೆಣ್ಣಿಗೆ ಪಾತಿವ್ರತ್ಯ ಲಭ್ಯವಾಗುತ್ತದೆ. ಅದು ನಮ್ಮ ಸಂಸ್ಕೃತಿಯ ಪ್ರತೀಕ. ಭಾರತೀಯ ಸನಾತನ ಧರ್ಮ. ಹೆಣ್ಣು ಪರಪುರುಷನ ಜೊತೆ ಮಾತನಾಡುವುದನ್ನು ಸಹಿಸುವುದಿಲ್ಲ. ಅವಳ ಸರ್ವಸ್ವವೂ ತನ್ನ ಗಂಡನಿಗೆ ಮಾತ್ರ ಮೀಸಲಾಗಿರಬೇಕು ಎಂಬುದು ಅತ್ತೆಯ ಮೂದಲಿಕೆ. ಆದರೆ ಪ್ರತಿಯೊಂದು ಹೆಣ್ಣು ತನ್ನ ಗಂಡನನ್ನು ದೇವರ ಸಮಾನ ಪೂಜಿಸುತ್ತಾಳೆ, ಗೌರವಿಸುತ್ತಾಳೆ.

**೨೨. "ಕದ್ರಕ್ಕಿಂತ ಮುದ್ರದು ಲೇಸು"**

ಪ್ರಾದೇಶಿಕ ಆಹಾರ ಧಾನ್ಯವಾಗಿ ಬಳಸುವ ರಾಗಿಯ ಮಹಿಮೆಯನ್ನು ಬಿತ್ತರಿಸುತ್ತದೆ. ರಾಗಿಯ ಮುದ್ದೆ ಮತ್ತು ರೊಟ್ಟಿಯನ್ನು ಮಾಡುವ ಬಗೆಯನ್ನು ತಿಳಿಸುತ್ತದೆ. ರೊಟ್ಟಿ ಮಾಡುವಾಗ ಹಿಟ್ಟು(ಮುದ್ದೆ), ರಾಗಿಯ ತರಿಹಾಕಿ ಕದಡಬೇಕು. ಅದು ಕಷ್ಟದ ಕೆಲಸ. ಅದಕ್ಕಿಂತಲೂ ತೊಟ್ಟವುದು ಇನ್ನೂ ಕಷ್ಟದ ಕೆಲಸ. ಮುದ್ದೆಮಾಡಿ ತಿರುವುದು, ಕಟ್ಟುವುದು ಉತ್ತಮ ಎಂದು ಹೇಳುತ್ತದೆ.

**೨೩. "ಊರಿಗೆ ಬಂದಳು ನೀರಿಗೆ ಬರದಲೇ ಇರ್ತಾಳಾ"**

ಹೊಸದಾಗಿ ಮದುವೆಯಾದ ಹೆಣ್ಣು ತನ್ನ ಗಂಡನ ಮನೆಗೆ ಬರುತ್ತಾಳೆ. ಹೊಸದಾಗಿ ಬಂದಂತಹ ಹೆಣ್ಣನ್ನು ನೋಡಬೇಕೆಂದು ಊರಿನ ಜನಕ್ಕೆಲ್ಲಾ ಆತುರ ಕಾತುರ. ಹೊಸದಾಗಿ ಊರಿಗೆ ಬಂದ ಸೊಸೆಯ ಸೌಂದರ್ಯವನ್ನು ನೋಡಬೇಕಾಗಿರುತ್ತದೆ. ಆದರೆ ಎಲ್ಲರೂ ಒಟ್ಟಿಗೆ ನೋಡಲು ಸಾಧ್ಯವಾಗುವುದಿಲ್ಲ. ಆ ಸಂದರ್ಭದಲ್ಲಿ 'ಸೊಸೆ' ಊರಿಗೆ ಶಾಶ್ವತವಾದ ಹೆಣ್ಣು. ಅಂದ ಮೇಲೆ ಬಂದಿಲ್ಲ ಒಂದು ದಿನ ನೀರು ತರಲು ಬರುತ್ತಾಳೆ, ಆಗ ನೋಡುತ್ತೇವೆ ಎಂದು ಸಮಾಧಾನ ಮಾಡಿಕೊಳ್ಳುತ್ತಾರೆ.

**೨೪. "ನಾನ್ ಕಳ್ಳಿ ಪರ್ರ ನಂಬೆ"**

ನಂಬಿಕೆ ಬಹಳ ಮುಖ್ಯ. ಅಂತಹ ನಂಬಿಕೆ ಪರಸ್ಪರರಲ್ಲಿ ಇರಬೇಕು. ಅವಳ ಊಳುಕು ಹೆಚ್ಚಾಗಿರುತ್ತವೆ. ಆದರೆ ಬೇರೆಯವರ ಬಗ್ಗೆ ಚಾಡಿಯನ್ನು ಹೇಳುವ ಸಂದರ್ಭದಲ್ಲಿ ಬಳಸುತ್ತಾರೆ. ತನ್ನ ಕಲ್ಲಾಟದ ಜಾಡುಗಳು ಅವಳಿಗೆ ಗೊತ್ತಿರುತ್ತವೆ. ತನ್ನಂತೆಯೇ ಇತರರು ಇರುತ್ತಾರೆಂದು ಅವರನ್ನು ನಂಬುವುದಿಲ್ಲ. ತನ್ನ ಬಗ್ಗೆ ತನಗಿರುವ ಅಪನಂಬಿಕೆಯನ್ನು ಸೂಚಿಸುತ್ತವೆ.

**೨೫. "ಮನುಷ್ಯ ಆಸೆ ತಂದನೆ ವರತು ಆಯುಷ್ಯ ತರಲಿಲ್ಲ"**

ಆಸೆ ಮತ್ತು ಆಯುಷ್ಯ ಮನುಷ್ಯನ ಜೀವಿತದ ಮುಖ್ಯ ಅಂಶಗಳು. ಮನುಷ್ಯ ನನಗೆ ಅದು ಬೇಕು, ಇದು ಬೇಕು ಎಂದು ಎಲ್ಲವನ್ನು ಗುಡ್ಡೆ ಹಾಕಿಕೊಂಡಿದನಂತೆ

ಅಷ್ಟರಲ್ಲಿ ತನ್ನ ಆಯುಷ್ಯಮುಗಿದು ಸತ್ತನಂತೆ ಆ ಸಮಯದಲ್ಲಿ ಬಳಸುತ್ತಾರೆ. ಮನುಷ್ಯ ತನ್ನ ಆಸೆಯನ್ನು ಪೂರೈಸಿಕೊಳ್ಳುವುದಕ್ಕೆ ಆಯಷ್ಯವೆಂಬ ಅಸ್ತ್ರದಿಂದ ಹೆಚ್ಚಿನ ಸಮಯ ತರಬೇಕಿತ್ತು. ಆಸೆಗಿಂತ ಆಯಸ್ಸು ಕಿರಿದು ಎಂಬುವುದು ಸ್ಪಷ್ಟ.

**೨೬. "ಸಂಗದಿಂದ ಸನ್ಯಾಸಿ ಕೆಟ್ಟ"**

ದುಷ್ಟರ ಕಂಡರೆ ದೂರ ಇರಬೇಕು. ಸಜ್ಜನರ ಸಂಗ ಮಾಡಬೇಕು. ಹೇಳಿಕೆಯಂತೆ ಸ್ನೇಹ ಎಂಬುದು ಯಶಸ್ಸು ಕೀರ್ತಿಗಳನ್ನು ಗಳಿಸಿಕೊಡುವ ಸ್ನೇಹ ಸೇತುವೆಯಾಗಬೇಕು. ದುಷ್ಟ ಜನರ ಸ್ನೇಹಮಾಡಿ ಕೆಟ್ಟವರ್ತನೆಗಳಿಗೆ ದುರಾಚಾರಗಳಿಗೆ ತೊಡಗಬಾರದು. ಸ್ನೇಹದ ಆಯ್ಕೆಯು ಉತ್ತಮವಾಗಿರಬೇಕು. ಕೆಟ್ಟ ಜನರ ಸ್ನೇಹ ಬೆಳೆಸಿದಾಗ ಸಂದರ್ಭದಲ್ಲಿ ಈ ಮಾತನ್ನು ಬಳಸುತ್ತಾರೆ. 'ಸನ್ಯಾಸ' ಮನಸ್ಸು ಎಂಥ ಪರಿಸ್ಥಿತಿಯಲ್ಲಿಯೂ ಕದಲು ಬಾರದಂತಹ ಪಕ್ವತೆ ಇರುತ್ತದೆ. ಅಂತಹ ಸನ್ಯಾಸಿಯೇ ದುಷ್ಟ ಜನರ ಸಹವಾಸ ಬೆಳೆಸಿ ದುಷ್ಕೃತ್ಯಗಳನ್ನು ಮಾಡುತ್ತಾನೆ. ಅಂತಹ ಸನ್ಯಾಸಯ ಸ್ಥಿತಿಯೇ ಹಾಗೆ ಆಗಿರುವಾಗ ಸಾಮಾನ್ಯಜನರ ಗತಿಯನ್ನು ಊಹಿಸಬೇಕಾಗುತ್ತದೆ. ನಾವು ಯಾರ ಜೊತೆ ಸ್ನೇಹವನ್ನು ಬೆಳೆಸುತ್ತೇವೆಯೋ ಅವರಂತೆ ಆಗುತ್ತೇವೆ ಎಂಬುದು ಸೂಚ್ಯ. ಸ್ನೇಹದ ಪರಕಾಷ್ಠತೆ ಸನ್ನತೆಯನ್ನು ಹೊಂದಿರಬೇಕು. ಸ್ನೇಹವು ಸಜ್ಜನರ ಸಹವಾಸ ಹೆಜ್ಜೇನು ಸವಿದ ಹಾಗೆ ಇರಬೇಕು.

**೨೭. "ಕಾಲು ಇರುವವರೆಗೆ ಓಡಾಟ ಕಣ್ಣು ಇರುವವರೆಗೆ ನೋಟ"**

ಮನುಷ್ಯನ ವ್ಯವಹಾರ ಶರೀರ ದೃಢಕಾಯ ಆಗಿರುವವರೆಗೂ. ವ್ಯಕ್ತಿಗೆ ಕಾಲು ಗಟ್ಟಿಯಾಗಿದ್ದರೆ ಎಲ್ಲಿಂದ ಎಲ್ಲಿಗೆ ಬೇಕಾದರೂ ಓಡಾಡಬಹುದು. ಕಣ್ಣು ಇರುವುದು ನೋಡುವುದಕ್ಕೆ ವಯಸ್ಸು ಮಾಗಿ ದೃಷ್ಟಿ ಮಂದ ಆಗುವವರೆಗೆ ನೋಡಬಹುದು. ವಯಸ್ಸಾದ ಅವ್ವನನ್ನು ಏನೇನಮ್ಮ ಓಡಾಟ? ಎಂದಾಗ ಕಾಲು ಇರುವವರೆಗೆ ಓಡಾಟ ಕಣ್ಣು ಇರುವವರಿಗೆ ನೋಟ ಎಂದು ಹೇಳಿದರು. ಸೃಷ್ಟಿಯು ಮನುಷ್ಯನಿಗೆ ನೀಡಿದ ಅಂಗಾಂಗಗಳು. ಚಲನವಲನ ಮನುಷ್ಯನ ಅಸ್ತಿತ್ವವಿರುವತನಕ ಎಂಬುದು ಸ್ಪಷ್ಟ.

**೨೮. "ಯೋಗ ಪಡೆದಿದ್ದು ಯೋಗಿ ಜೋಗಿ ಪಡೆದದ್ದು ಜೋಗಿ"**

ಕಷ್ಟ ಪಡುವವರು ಯಾವಾಗಲೂ ಕಷ್ಟ ಪಡಬೇಕು. ಸುಖಪಡುವವರು ಯಾವಾಗಲೂ ಸುಖದಿಂದ ಇರುತ್ತಾರೆ ಎನ್ನುವ ಸಂದರ್ಭದಲ್ಲಿ ಬಳಸುತ್ತಾರೆ. ಯೋಗಿದ್ಧಿ ಪಡೆಯಲು ಅನೇಕ ಕಸರತ್ತು ಮಾಡಬೇಕು. ಕಷ್ಟಪಟ್ಟು ಧ್ಯಾನಮಾಡಬೇಕು ಆದರೆ ಜೋಗಿ ಮನೆ ಮನೆಗೆ ಹೋಗಿ ಪಡಿಯ (ಊಟ) ಪದಾರ್ಥಗಳನ್ನು ಪಡೆಯುತ್ತಾನೆ. ಜೋಗಿಗೆ ಕಷ್ಟದ ಪರಿವೇ ಗೊತ್ತಿಲ್ಲ. ಆದರೆ ಯೋಗಿಯು

ಜೀವನಪೂರ್ತಿ ಕಷ್ಟಪಡಬೇಕು. ಯೋಗಿಯು ಬಟ್ಟೆಬರೆ, ಆಹಾರ, ನೀರು, ಎಲ್ಲವನ್ನು ಪಡೆಯಲು ಕಷ್ಟಪಡಬೇಕು. ಆದರೆ ಜೋಗಿ ಜೀವನ ಆಗಲ್ಲ. ಉಳುವುದಿಲ್ಲ, ಬಿತ್ತುವುದಿಲ್ಲ. ಸಲೀಸಾಗಿ ಆಹಾರವನ್ನು ಪಡೆಯುತ್ತಾರೆ. ಬಡವರು ಯಾವಾಗಲೂ ಕಷ್ಟಪಡುತ್ತಿರಬೇಕು. ಶ್ರೀಮಂತ ತಮ್ಮ ಹಣದಿಂದ ಸುಖವಾಗಿರುತ್ತಾರೆ.

**೨೬. "ಒಡವೆಳು ಒಡವೆ ಕತ್ತುಕೊಂಡ್ರೆ ಮದಲಿಗಿತ್ತಿಗೇಕೆ ಗೊಡಗಾಟ"**

ಮದುವೆಯ ಸಂದರ್ಭದಲ್ಲಿ ಒಡವೆ ಇದ್ದವರು ಮದುವಣಗಿತ್ತಿ ಆಭರಣಗಳನ್ನು ಅಲಂಕಾರಕ್ಕೆ ಕೊಟ್ಟಿರುತ್ತಾರೆ. ಗಂಡನಮನೆಯಿಂದ ಮದುವಣಗಿತ್ತಿಯನ್ನು ಮನೆಗೆ ಕರೆದುಕೊಂಡ ಬಂದ ಮೇಲೆ ಒಂದೆರಡು ದಿನಗಳಲ್ಲಿ ಆ ಒಡವೆಗಳನ್ನು ಒಡವೆ ಮನೆಯವರು ವಾಪಸ್ಸು ಪಡೆದುಕೊಳ್ಳುತ್ತಾರೆ. ಇತ್ತ ಮದುವಣಗಿತ್ತಿ ಒಡವೆಯವರನ್ನು ಬಯ್ಯುತ್ತಾಳೆ. ಕೊಡುವುದನ್ನು ಕೊಟ್ಟರೆ ನನಗೇನು ಉಳಿಯುತ್ತದೆ ಅನ್ನುವಂತೆ ಕೊಟ್ಟ ವಸ್ತುವನ್ನು ವಿನಮ್ರಪೂರ್ವಕವಾಗಿ ಕೃತಜ್ಞತೆಯಿಂದ ಹಿಂದುರಿಗಿಸಬೇಕು.

**೩೦. "ಒಪ್ಪತ್ತು ಗಂಜಿ ಕುಡ್ದ್ರು ಗಂಡನ ಮನೆ ಲೇಸು"**

ಸಾಂಸಾರಿಕ ಜೀವನ ಮಧುರ ಬಾಂಧವ್ಯಗಳ ಮಿಲನ. ಪತಿಪತ್ನಿಯು ಪರಸ್ಪರ ಒಬ್ಬರನ್ನು ಒಬ್ಬರು ಅರ್ಥಮಾಡಿಕೊಳ್ಳಬೇಕು. ಪತಿಪತ್ನಿಯರಲ್ಲಿ ಹೊಂದಾಣಿಕೆ ಇಲ್ಲದಾಗ ಸಂಸಾರದಲ್ಲಿ ಬಿರುಕುಬಿಡುತ್ತದೆ. ಪತ್ನಿಯು ಪತಿ ಜೊತೆ ಜಗಳವಾಡಿಕೊಂಡು ತನ್ನ ತವರು ಮನೆಗೆ ಹೋಗುತ್ತಾಳೆ. ತನ್ನ ತವರು ಮನೆಯಲ್ಲಿ ಆತಿಥ್ಯವನ್ನು ಸರಿಯಾಗಿ ಮಾಡುವುದಿಲ್ಲ. ತನ್ನ ತವರು ಮನೆಗಿಂತ ಗಂಡನ ಮನೆಯೇ ಉತ್ತಮ ಎನಿಸುತ್ತದೆ. ಒಂದು ಹೆಣ್ಣಿಗೆ ಮದುವೆಯಾಗುವರೆಗೆ ಮಾತ್ರ ತವರು. ಮದುವೆಯ ನಂತರ ತಾಳಿ ಕಟ್ಟಿದ ಗಂಡನ ಮನೆಯೇ ಲೇಸು. ಹೆಣ್ಣಿಗೆ ಗಂಡನ ಮನೆಯೇ ಶಾಶ್ವತ. ಗಂಡನಮನೆಯಲ್ಲಿ ಪತಿಯು ಅರ್ಧಹೊಟ್ಟೆಗೆ ಕೊಟ್ಟರೂ ಗಂಡನ ಮನೆಯೇ ನೆಮ್ಮದಿಯ ತಾಣ.

**೩೧. "ಮಗನ ಮಾರಿ ಮಾಳ್ಯಾವು ಮಾಡು"**

ಮಾಳ್ಯದಬ್ಬ, ಪಿತೃಪಕ್ಷ ಎಂದು ನಾನಾ ಹೆಸರುಗಳಿಂದ ಮಾಳ್ಯಪಕ್ಷವನ್ನು ಕರೆಯುತ್ತಾರೆ. ಹಿರಿಯರಿಗೆ ಎಡೆಯನ್ನು ಅಥವಾ ಊಟವನ್ನು ಕೊಡುವ ಹಬ್ಬ. ಪ್ರಾದೇಶಿಕವಾಗಿ ಮಾಳ್ಯದಬ್ಬವು ಬಹಳ ಮುಖ್ಯವಾದ ಹಬ್ಬವಾಗಿದೆ. ಹೊಸ ಬಟ್ಟೆ ತಂದು ಸತ್ತವರು ಇಷ್ಟಪಡುವ ತಿನಿಸುಗಳನ್ನೆಲ್ಲಾ ಮಾಡಿ ಎಡೆಯನ್ನು ಹಾಕುತ್ತಾರೆ. ಒಂದೊಂದು ಜಾತಿಯವರು ಒಂದೊಂದು ರೀತಿಯ ಆಹಾರ ಪದಾರ್ಥಗಳನ್ನು ಮಾಡುತ್ತಾರೆ. ಒಬ್ಬರು ಮಾಂಸಾಹಾರ ಮಾಡಿದರೆ, ಮತ್ತೊಬ್ಬರು ಸಿಹಿತಿನಿಸುಗಳನ್ನು ಮಾಡುತ್ತಾರೆ. ಅಂತಹ ಸಂದರ್ಭದಲ್ಲಿ ಪಿತೃಪಕ್ಷ ಮಾಡಲು ಹಣ ಒದಗಿಲ್ಲ

ಎನ್ನುವಂತಿಲ್ಲ. ಹಿರಿಯರಿಗೆ ಎಡೆಯನ್ನು ಕೊಡದಿದ್ದರೆ ಕೆಡಕು. ಸಾಲಸೋಲವನ್ನು ಮಾಡಿಯಾದರೂ ಹಬ್ಬ ಮಾಡಬೇಕೆಂದು ಸೂಚಿಸುತ್ತದೆ.

**೩೨. "ಬಡವ್ರು ಮನೆ ಊಟ ಚಂದ ದೊಡ್ಡವ್ರ ಮನೆ ನೋಟ ಚಂದ"**

ಬಡವರು ಶ್ರೀಮಂತರಿಗೆ ಇರುವ ಅಸಾಮಾನ್ಯ ಹೋಲಿಕೆಯನ್ನು ಈ ಗಾದೆಯು ನೀಡುತ್ತದೆ. ಬಡವರಿಗೆ ಸ್ವಾಭಿಮಾನ ಶ್ರೀಮಂತರಿಗೆ ದುರಾಭಿಮಾನ. ಬಡವರದು ಆಂತರಿಕವಾದರೆ ಶ್ರೀಮಂತರದ್ದು ತೋರಿಕೆ ಜೀವನ. ಬಡವರ ಮನೆಯಲ್ಲಿ ಅತಿಥಿ ಸತ್ಕಾರ ಮನತುಂಬಿ ಮಾಡುತ್ತಾರೆ. ಆದರೆ ದೊಡ್ಡವರ ಮನೆಯಲ್ಲಿ ಅತಿಥಿ ಸತ್ಕಾರ ಶೋಕಿ ಮಾತಿನ ಒನಪು ಒಯ್ಯಾರದಿಂದ ಕೂಡಿರುತ್ತದೆ. ಬಡವರು ಮೊದಲೇ ಅನ್ನ ಬಟ್ಟೆಗೆ ತಕ್ಕಮಟ್ಟಿಗೆ ಇರುತ್ತಾರೆ. ಬಡವರ ಮನೆಯ ಊಟ ರುಚಿಕರ ದೊಡ್ಡವರ ಮನೆ ಸೌಂದರ್ಯವನ್ನು ವೀಕ್ಷಿಸಲು ಚಂದ. ಯಾರೇ ನೆಂಟರು ಮನೆಗೆ ಬಂದಾಗ ಊಟ ಕೊಟ್ಟು ಉಪಚಾರ ಮಾಡದಿದ್ದ ಸಂದರ್ಭದಲ್ಲಿ ಬಳಸುತ್ತಾರೆ.

**೩೩. "ರಾಗಿ ಕಲ್ಲಾಡಿದರೆ ನಾಡೆಲ್ಲ ನೆಂಟರಂತೆ ರಾಗಿಕಲ್ಲು ಮೂತಿಗೆ ನಿಂತರೆ ನಂಟನೂ ಇಲ್ಲ ರಾಗಿ ಕಲ್ಲು ಇಲ್ಲ"**

ರಾಗಿ ಮತ್ತು ರಾಗಿಕಲ್ಲು, ರಾಗಿಕಲ್ಲು ಮತ್ತು ನೆಂಟರಿಗೂ ಅನೂನ ಸಂಬಂಧವಿದೆ. ರಾಗಿಯು ಸಮೃದ್ಧಿಯಾಗಿ ಇದ್ದಾಗ ನೆಂಟರು ಬಂಧುಬಳಗ ಎಲ್ಲರೂ ಬಂದು ಹೋಗುತ್ತಾರೆ. ಅದೇ ರಾಗಿ ಬೆಳೆಯುವುದು ನಿಂತು, ರಾಗಿ ಕಲ್ಲು ಸವೆದು ತನ್ನ ಕ್ರಿಯೆಯನ್ನು ಕಳೆದುಕೊಂಡಾಗ ನೆಂಟರು ಬಂಧು ಬಳಗ ಯಾರು ಬರುವುದಿಲ್ಲ. ಈ ಗಾದೆಯ ಒಂದು ಯಜಮಾನನ ಇರುವಿಕೆಯನ್ನು ಅವನ ಸೋತು ದಣಿದಾಗ ಯಾರು ಇಲ್ಲದಿದ್ದನ್ನು ತಿಳಿಸುತ್ತದೆ. ನೆಂಟರು ಎಂದರೆ ಇದ್ದಾಗ ನೆಂಟರು, ಇಲ್ಲದಿದ್ದಾಗ ಇಲ್ಲ ಎಂಬುದನ್ನು ಸೂಚಿಸುತ್ತದೆ.

**೩೪. "ಬೋದರು ಬರ್ಲ್ ಬೈಸಿಕೊಂಡರು ಬಸವಣ್ಣ"**

ಬೈಯ್ಯುತ್ತಿರುವ ಸಂದರ್ಭದಲ್ಲಿ ಬಳಸುತ್ತಾರೆ. ಯಾವಾಗಲೂ ಬೈಯ್ಯುವವರು. ಪೊರಕೆಯ ಶಬ್ದದ ಹಾಗೆ ಕರ್ಕಶ ಶಬ್ದ ಮಾಡುತ್ತಾ ಸವೆಯುತ್ತಾ ಹೋಗುತ್ತದೆ. ವ್ಯಕ್ತಿಯ ಆರೋಗ್ಯದ ದೃಷ್ಟಿಯಿಂದ ಒಳ್ಳೆಯದಲ್ಲ. ಆದರೆ ಬೈಸಿಕೊಳ್ಳುವವರು ಬಸವಣ್ಣ (ಎತ್ತು) ಹಾಗೆ ಸುಮ್ಮನಿರಬೇಕು ಎಂಬುದನ್ನು ಸೂಚಿಸುತ್ತದೆ.

**೩೫. "ತರ್ಗ ತಲೆ ತಾಳೆ ಹೂ ಮಾಡಿದ್ದರೇನು ಬೋಳ ತಲೆಗೆ ಎಣ್ಣೆ ಹಾಕದಿದ್ದರೇನು"**

ಯಾವುದು ಯೋಗ್ಯವೋ ಯಾವುದು ಎಲ್ಲಿ ಇರಬೇಕು ಅಲ್ಲಿದ್ದರೆ ಚೆನ್ನ. ಇಲ್ಲದಿದ್ದರೆ ಆ ವಸ್ತುವಿಗಾಗಲಿ ವ್ಯಕ್ತಿಗಾಗಲಿ ಬೆಲೆ ಇರುವುದಿಲ್ಲ. ಅವರ ಸ್ಥಾನಮಾನ

ನಿರರ್ಥಕ. ತಲೆ ಬುರುಡೆಯಲ್ಲಿ ತಲೆ ಕೂದಲು ಉದುರಿದೆ. ಅದಕ್ಕೆ ತಾಳೆಯ ಹೂ ಮುಡಿಯುವುದು ಸರಿಯಲ್ಲ. ತಲೆಯ ಕೂದಲು ಸಂಪೂರ್ಣವಾಗಿ ಉದುರಿದ ಅದಕ್ಕೆ ಎಣ್ಣೆ ಹಾಕಿ ಪ್ರಯೋಜನವಿಲ್ಲ. ಕೂದಲು ಮತ್ತೆ ಎಂದೂ ಹುಟ್ಟುವುದಿಲ್ಲ. ತಾಳೆ ಹೂ ಮತ್ತು ಎಣ್ಣೆಯನ್ನು ಸೊಂಪಾಗಿರುವ ಕೂದಲಿಗೆ ಹಾಕಿದರೆ ಲೇಸು ಎಂಬುದನ್ನು ಸೂಚಿಸುತ್ತದೆ.

**೩೬. "ತಕ್ಕಟ್ಟು ಉಂಡು ಮುಕ್ಕಟ್ಟು ಬಳಸು"**

ಜನಪದ ಮಾತು ಅಳತೆಗೋಲನ್ನು ಸೂಚಿಸುತ್ತವೆ. ಅತಿಯಾದ ಊಟವಾಗಲಿ, ಅತಿಯಾದ ಖರ್ಚು ಒಳ್ಳೆಯದಲ್ಲ. ಊಟದಲ್ಲಿ ಹಿತಮಿತವಿರಬೇಕು. ಸ್ವಲ್ಪ ಏರುಪೇರು ಆದರೂ ಆರೋಗ್ಯದಲ್ಲಿ ಅಸ್ತವ್ಯಸ್ತವಾಗುತ್ತದೆ. ವ್ಯವಹಾರದಲ್ಲಿ ಮಿತ ಬಳಕೆ ಇರಬೇಕು. ದುಂದುಗಾರಿಕೆ ಒಳ್ಳೆಯದಲ್ಲ, ಅದು ಸಾಲಕ್ಕೆ ಎಡೆಮಾಡಿಕೊಡುತ್ತದೆ. ವ್ಯವಹಾರದಲ್ಲಿ ಬಿಗಿ ಹಿಡಿತ ಇರಬೇಕು. ಮುಂದಿನ ಭವಿಷ್ಯಕ್ಕೆ ಸಂಪಾದಿಸಿದರಲ್ಲಿ ಕೂಡಿಡಬೇಕು.

**೩೭. "ಕಣ್ಣಲ್ಲಿ ನೋಡಿ ಮನದಲ್ಲಿ ಸೌರಿಸಲಿಲ್ಲ"**

ಮನುಷ್ಯನ ಕರುಬುತನವನ್ನು ವ್ಯಕ್ತಪಡಿಸುತ್ತದೆ. ಮನುಷ್ಯ ಮನುಷ್ಯನೇ ಅಭಿವೃದ್ಧಿಯಾಗುವುದನ್ನು ಸಹಿಸಿಕೊಳ್ಳುವುದಿಲ್ಲ. ಮನೆ ಕಟ್ಟಿದರೆ, ಬೆಳೆ ಉಲುಸಾಗಿ ಬಂದರೆ, ಹೊಸದಾಗಿ ವಸ್ತುಗಳನ್ನು ಖರೀದಸಿದರೆ ಮುಂತಾದ ಸಂದರ್ಭಗಳಲ್ಲಿ ಇದರ ಬಳಕೆ ಕಾಣಬಹುದು. ನೋಟ ಶುದ್ಧವಾಗಿರಬೇಕು. ಮನಸ್ಸು ಪರಿಶುದ್ಧವಾಗಿರಬೇಕು.

**೩೮. "ತ್ವಾಟ ಹಾಳಾಗುವ ಕಾಲಕ್ಕೆ ಓತಿ ಮರವೆಲ್ಲ ಕಾಯಿ ಬಿಟ್ಟವಂತೆ"**

ಕಲಿಯುಗವನ್ನು ಅಂದರೆ ದುರಂತವನ್ನು ಈ ಗಾದೆ ಸೂಚಿಸುತ್ತದೆ. ಇಡೀ ತೋಟವೇ ಹಾಳಾಗುತ್ತಿದೆ. ಅಂತಹ ಕಾಲದಲ್ಲಿ ಒಣಗಿ ಹೋಗಿದ್ದ ಮರಗಳೆಲ್ಲಾ ಕಾಯಿಬಿಟ್ಟವಂತೆ. ಇದು ಸಹಜ ಪ್ರಕ್ರಿಯೆಗೆ ವಿರುದ್ಧವಾದ ಕ್ರಿಯೆಯಾಗಿದೆ. ಒಣಗಿದ ಮರ ಕಾಯಿ ಬಿಡಲು ಸಾಧ್ಯವಿಲ್ಲ. ಇಡೀ ಸನ್ನಿವೇಶ ಭೀಕರ, ಅನಾಹುತ, ನಾಶವನ್ನು ಸೂಚಿಸುತ್ತದೆ.

**೩೯. "ಕಾಲ್ ಕೆಟ್ಟಾಗ ಕಾಗೆ ರಾಗಿ ತಿಂತು"**

ಕಾಗೆ ಯಾವುದೇ ಸಂದರ್ಭದಲ್ಲಿ ಆಗಲಿ ರಾಗಿಯನ್ನು ತಿನ್ನುವುದಿಲ್ಲ. ಅದು ಸಮೃದ್ಧಿಯ ಕಾಲದಲ್ಲಿ ಪ್ರತಿಷ್ಠೆಯ ಸಂಕೇತವಾಗಿ ಕಾಗೆ ಕಾಣಿಸಿಕೊಳ್ಳುತ್ತದೆ. ಅದೇ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ತನ್ನ ಉತ್ಕೃಷ್ಟ ಆಹಾರ ಪದಾರ್ಥಗಳನ್ನು ತೊರೆದು ಪರಿಸ್ಥಿತಿಯ

ಕೈಗೊಂಬೆಯಾಗಿ ಅನಿವಾರ್ಯವಾಗಿ ರಾಗಿಯನ್ನು ತಿನ್ನಬೇಕಾಗುತ್ತದೆ. ಶ್ರೀಮಂತರು ಧೀಮಂತಿಕೆಯ ದರಬಾರಿನಲ್ಲಿ ಜೀವನ ನಡೆಸುತ್ತಾರೆ. ಕಾಲದ ಚಕ್ರಗತಿಯಲ್ಲಿ ಶ್ರೀಮಂತ ಬಡವನಾದಾಗ ಅಂತಹ ಪರಿಸ್ಥಿತಿಗೆ ಒಗ್ಗಿಕೊಳ್ಳದೇ ಬೇರೆ ಮಾರ್ಗವಿಲ್ಲ.

**೪೦. "ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ"**

ಕೊಡುವ ತೆಗೆದುಕೊಳ್ಳುವ, ಸಂತೈಸುವ, ಗೌರವಿಸುವ, ಆತಿಥ್ಯ ಮುಂತಾದ ಸಂದರ್ಭಗಳಲ್ಲಿ ಎಲ್ಲರಲ್ಲಿಯೂ ಸಮಾನವಾದ ಪ್ರೀತಿ, ವಿಶ್ವಾಸ ಆದರಗಳನ್ನು ತೋರಿಸಬೇಕು ಎನ್ನುವ ಸಂದರ್ಭದಲ್ಲಿ ಬಳಸುತ್ತಾರೆ. ಸಮಾನದೃಷ್ಟಿ ಪರಿಪೂರ್ಣತೆಯ ಮಹತ್ವವನ್ನು ಸೂಚಿಸುತ್ತದೆ. ಮನುಷ್ಯನಿಗೆ ಎರಡು ಕಣ್ಣುಗಳೂ ಮುಖ್ಯ. ಒಂದು ಕಣ್ಣು ಉಚ್ಚ ಇನ್ನೊಂದು ಕಣ್ಣು ನೀಚ. ಕನಿಷ್ಠ ಭಾವಿಸಿದಾಗ ಯಾವುದೇ ಒಂದು ಕಣ್ಣಿನ ಊನತೆ, ನೋವು ಆ ಮನುಷ್ಯನಿಗೆ ಸೇರಿರುತ್ತವೆ. ಒಂದು ಗಂಡು ಮಗು, ಒಂದು ಹೆಣ್ಣು ಮಗು, ಇವೆರಡರಲ್ಲಿಯೂ ಲಿಂಗ ವ್ಯತ್ಯಾಸ ಅಷ್ಟೇ. ಆದರೆ ಎರಡೂ ಮಕ್ಕಳೂ ಗಂಡು ಎಂದಾಗ ಸ್ವಲ್ಪ ಹೆಚ್ಚಿಗೆ ಪ್ರೀತಿಯನ್ನು ಹೆಣ್ಣು ಎಂದಾಗ ಸ್ವಲ್ಪ ಕಡಿಮೆ ಪ್ರೀತಿಯೂ ಸರಿಯಲ್ಲ.

**೪೧. "ಕುಂಡನಿಗೆ ಬಾಡು ಹಾಕವತ್ತಿಗೆ ನನಗೆ ಇಷ್ಟು ಹಾಕಿದರಲ್ಲ ಮನೆಮಂದಿಯಲ್ಲಾ ಎಷ್ಟು ತಿಂದಿರಬೇಕು ಅಂದುಕೊಂಡನಂತೆ"**

ಇಲ್ಲಿ ಮನಸ್ಸಿನಲ್ಲಿ ಖಿನ್ನತೆ ಜೊತೆಗೆ ಅಂಗದ ಊನತೆಯೂ ಸೇರಿದೆ. ಮೊದಲೇ ಕುಂಡನೆಂದು ಅಂತಃಕರಣದಿಂದ ಆಹಾರಪದಾರ್ಥಗಳನ್ನು ಹಂಚುವಾಗ ಒಂದು ಕೈಮುಂಗಡವಾಗಿ ಕೊಡುತ್ತಾರೆ. ಕುರುಡ ನನಗೆ ಇಷ್ಟು ಹಾಕಿದ್ದಾರೆ ಅವರೆಲ್ಲ ಇನ್ನೆಷ್ಟು ಹಾಕಿಕೊಂಡಿರಬೇಕು ಎಂದು ಊಹಿಸುತ್ತಾನೆ. ಕುರುಡನಿಗೆ ನನಗೆ ಹೆಚ್ಚುಗಟ್ಟಲೆ ಹಾಕಿದ್ದಾರೆ ಎಂದು ಸಮಾಧಾನವನ್ನು ವ್ಯಕ್ತಪಡಿಸುವ ಬದಲು ಅಸಮಾಧಾನ ವ್ಯಕ್ತಪಡಿಸುತ್ತಾನೆ. ಮನಸ್ಸಿನ ದೌರ್ಬಲ್ಯವನ್ನು ತಿಳಿಸುತ್ತದೆ. ಕೊಡುವ ಸಂದರ್ಭದಲ್ಲಿ ನನಗೆ ಇಷ್ಟೇನಾ ಎಂದಾಗ ಬಳಸುತ್ತಾರೆ.

**೪೨. "ಸೆಟ್ಟಿ ಸತ್ತಾಗಲೇ ಗೊತ್ತತಂತೆ ಸಾಲ"**

ಮೇಲಿನ ನೋಟಕ್ಕೆ ಶ್ರೀಮಂತರಾಗಿ ಒಳಗೆ ನೋಡಿದರೆ ಲೊಟವಟ್ಟಿ. ಮೇಲಿನ ನೋಟಕ್ಕೆ ಶ್ರೀಮಂತರಾಗಿ ಕಾಣಿಸಿದರೆ ಅದು ಬಾಹ್ಯ ವ್ಯವಹಾರ. ಆದರೆ ಒಳಗಿನ ವ್ಯವಹಾರದಲ್ಲಿ ಸಾಲಸೋಲವನ್ನು ಮಾಡಿರುತ್ತಾರೆ. ಸೆಟ್ಟಿ ಎಂದ ಕೂಡಲೇ ಹಣವಂತ ಎಂದು ಮೇಲಿನ ನೋಟಕ್ಕೆ ಕಾಣಿಸುತ್ತದೆ. ಆದರೆ ಸೆಟ್ಟಿ ಸತ್ತಾಗೆ ಗೊತ್ತಾಗುತ್ತದೆ. ಅವನು ಮಾಡಿದ ಸಾಲಸೋಲದ ಪರಿಗಳು. ದೊಡ್ಡ ಮನುಷ್ಯರು ಒಳ್ಳೆಯವರು

ಅವರ ಹತ್ತಿರ ಹಣವಿದೆ ಎಂದು ತಿಳಿದುಕೊಂಡಿರುತ್ತೇವೆ. ಅಂತಹವರು ಸತ್ತಾಗ ಅವರ ಮನೆಬಾಗಿಲಿಗೆ ಬಂದಂತಹ ಸಾಲಕೊಟ್ಟಂತಹ ವ್ಯಕ್ತಿಗಳನ್ನು ನೋಡಿ ಹೇಳುತ್ತಾರೆ. ಮನುಷ್ಯನ ವ್ಯವಹಾರ ನಿಖರ ಸ್ಪಷ್ಟ ಎಂದು ಹೇಳುವುದಕ್ಕೆ ಬರುವುದಿಲ್ಲ.

**೪೩. "ಚೊಗಚಗಾತಿ ಮನೆಯಲ್ಲಿ ಚಿಗಟ ಮೂಗಂಡುಂಗ"**

ಒಪ್ಪ ವೈರ ಚೊಕ್ಕಟ್ಟು ಸ್ವಚ್ಛ ಎನ್ನುವ ಪದವನ್ನು ಸೂಚಿಸುತ್ತದೆ. ಒಂದು ಮನೆಯಲ್ಲಿ ಯಾವಾಗಲೂ ಸ್ವಚ್ಛವಾಗಿರಬೇಕು ಎಂದು ಹೇಳುತ್ತಿದ್ದ. ಅವಳ ಮನೆಯಲ್ಲಿ ಮೂರುಗಂಡುಂಗ ಚಿಗಟ ಇದ್ದವಂತೆ. ಸ್ವಚ್ಛ ಸ್ವಚ್ಛ ಎಂದು ಬರಿಯ ಮಾತಿಗೆ ಹೇಳುತ್ತಿದ್ದು ಅವಳು ಮನೆಯನ್ನು ಮಾತ್ರ ಶುದ್ಧ ಮಾಡುತ್ತಿರುವೆಂದು ಹೇಳುತ್ತದೆ. ಹೇಳುವುದು ಸುಲಭ ಅದನ್ನು ಕಾರ್ಯಗತಿ ತರಬೇಕು. ಹೇಳಿದ್ದನ್ನ ಮಾಡಲಿಲ್ಲವೆಂದರೆ ಅಪಹಾಸ್ಯಕ್ಕೆ ಈಡಾಗುತ್ತದೆ.

**೪೪. "ಅವರ‍್ಯಾಡಿ ಇವರ‍್ಯಾಡಿ ಅವರೆ ಕಾಳಿಗೆ ಎರಡು ಮಗಳಾದ್ವಂತೆ"**

ಈ ಗಾದೆಯು ಮೇಲಿನ ನೋಟಕ್ಕೆ ಅಪಹಾಸ್ಯದಂತೆ ಕಂಡುಬರುತ್ತದೆ. ಆದರೆ ಇವರ ಆಂತರಿಕ ಅರ್ಥ ಸ್ತ್ರೀಯ ಕಳ್ಳಾಟದ ಪರಿವೆಯನ್ನು ಸೂಚಿಸುತ್ತವೆ. ಸ್ತ್ರೀಯು ಒಂದಕ್ಕಿಂತ ಹೆಚ್ಚಿನ ಸಂಬಂಧವನ್ನು ಹೊಂದಿದಾಗ ಈ ಮಾತನ್ನು ಬಳಸುತ್ತಾರೆ. ಜನಪದರು ಯಾವುದೇ ವ್ಯವಹಾರವಾಗಲಿ ಮುಚ್ಚುಮರೆ ಇಲ್ಲ ಇದ್ದದ್ದನ್ನು ಇದ್ದ ಹಾಗೆ ಹೇಳುವ ನೇರ ನುಡಿಯವರು. ಅವರೇ ಕಾಳನ್ನು ಅವರಿರುವ ಮನೆಯಿಂದ ತಂದುಹಾಕಿ ಅದರಿಂದ ಅವರೇಕಾಳನ್ನು ಪಡೆಯುವಂತೆ ಎಂದು ಪ್ರತೀಕವಾಗಿ ಬಳಸಿದ್ದಾರೆ.

**೪೫. "ಹಾದರಗಿತ್ತಿಗೆ ಹಾಸ್ಮಂಚ ಗರ್ತಿಗೆ ಬೂದಿಗುಂಡಿ"**

ಹಾದರಗಿತ್ತಿ, ಗರತಿ ಎಂದು ಸ್ತ್ರೀಯ ಪಾವಿತ್ರ್ಯತೆಯನ್ನು ಬಣ್ಣಿಸಿದ್ದಾರೆ. ಹಾದರಗಿತ್ತಿ ಅನ್ಯ ಗಂಡಸರುಗಳ ಜೊತೆ ಅನೈತಿಕ ಸಂಬಂಧವಿರಿಸಿಕೊಂಡಿರುತ್ತಾಳೆ. ಹಾದರಗಿತ್ತಿ ಮಲಗಲು ಮಂಚ ಅಂದರೆ ಸುಖದ ಸುಪ್ಪತ್ತಿಗೆ. ಆದರೆ ಒಬ್ಬನಿಗೆ ಮಡದಿಯಾಗಿರುವ ಹೆಂಡತಿಗೆ ಕೊಳಕಾದ ಸ್ಥಳ ಮಲಗುವ ಸ್ಥಳವಾಗಿದೆ. ಹಾದರಗಿತ್ತಿಯ ಸ್ಥಾನ ಆಕರ್ಷಣೀಯ ಮತ್ತು ತೋರಿಕೆ. ಹಾದರಗಿತ್ತಿಯ ಸ್ಥಾನಕ್ಕಿಂತ ಗರತಿಯ ಮಲಗುವ ಸ್ಥಳ ಕೊಳಕು ಬೂದಿಗುಂಡಿಯಾಗಿರಬಹುದು. ನಿಜವಾದ ಗೌರವ ಪೂಜ್ಯ ಸ್ಥಾನಮಾನ–ವಿರುವುದು ಪತಿವ್ರತೆಗೆ. ಅಗ್ರಮಾನ್ಯ ಅಗ್ರಗಣ್ಯ ಸ್ಥಾನಮಾನ ಇರುವುದು ಗರತಿಗೆ.

**೪೬. "ಅಟ್ಟ ಮೇಲೆ ಒಲೆ ಉರಿತು ಕೆಟ್ಟ ಮೇಲೆ ಬುದ್ಧಿ ಬಂತು"**

ಮಾಡಬೇಡ ಎಂದು ಹೇಳಿದ ಕಾರ್ಯವನ್ನು ಮಾಡಿದಾಗ ಆ ಕೆಲಸದಿಂದ ಕೆಡುಕುಂಟಾದಾಗ ಅರಿವಿಗೆ ಬಂದಂತಹ ಸಂದರ್ಭದಲ್ಲಿ ಬಳಸುತ್ತಾರೆ. ಮೊದಲೇ

ಮುಂಜಾಗ್ರತೆ, ಮುನ್ನೆಚ್ಚರಿಕೆಯನ್ನು ವಹಿಸಬೇಕು ಎಂಬುದು ಸೂಚ್ಯ. ಅಡಿಗೆಲ್ಲ ಆದಮೇಲೆ ಒಲೆ ದಿಗ್ಗಟ್ಟಿಕೊಂಡು ಉರಿತ್ತಿತ್ತು. ಎಲ್ಲ ಮುಗಿದ ಮೇಲೆ ತನ್ನ ತಪ್ಪಿನ ಅರಿವಾಯಿತಂತೆ, ಈ ಎರಡೂ ವ್ಯರ್ಥ. ಮೊದಲೇ ಬುದ್ಧಿ ಉಪಯೋಗಿಸಿದರೆ ಸಫಲ ಕಾರ್ಯ ಸಿದ್ಧಿ.

**೪೭. "ಮಾತು ಮನೆ ಕೆಡಿಸಿತಂತೆ ತೂತು ಒಲೆ ಕೆಡಿಸಿತಂತೆ."**

ನಮ್ಮ ಜನಪದರು ಕೊಡುವ ಮಾತು ಹಿತವಾಗಿರಬೇಕು. ಆ ಮಾತು ಅನ್ಯರಿಗೆ ಕೆಡಕನ್ನು ಉಂಟುಮಾಡಬಾರದು. ಮಾಡಬೇಕಾದ ಕೆಲಸವನ್ನು ಮಾಡದೆ ಮಾತನಾಡುತ್ತಾ ಆ ಕೆಲಸ ಕೆಟ್ಟುಹೋಗುತ್ತದೆ ಮಾಡಬೇಕಾದ ಕೆಲಸವನ್ನು ಮೊದಲು ಮಾಡು ಎಂಬುದನ್ನು ಮಾತಿನ ಮೂಲಕ ಹೇಳುತ್ತಾರೆ. ಒಳ್ಳೆಯ ಮಾತು ಒಳ್ಳೆಯ ಪರಿಣಾಮವನ್ನು ಉಂಟುಮಾಡಿದರೆ ಕೆಟ್ಟ ಮಾತು ಇಡೀ ಸಂಸಾರವನ್ನೇ ಅಲ್ಲೋಲ ಕಲ್ಲೋಲವನ್ನು ಉಂಟುಮಾಡುತ್ತವೆ. ಹಾಗೆ ತೂತಾಗಿರುವ ಮಡಕೆಯನ್ನು ಒಲೆಯ ಮೇಲೆ ಇಟ್ಟರೆ ಒಲೆಯನ್ನು ಹಾರಿಸುತ್ತದೆ. ಮಾತು ಉಳಿಸುವ ಕೆಲಸವನ್ನು ಆಡಬೇಕು. ಅಳಿಸುವ ಕೆಲಸ ಮಾಡಬಾರದು. ಅತಿಯಾದ ಮಾತು ಒಳ್ಳೆಯದಲ್ಲ.

**೪೮. "ಸಾಕ್ಷಿ ಹೇಳೆ ಸಗಣಗಳ್ಳೆ ಅಂದರೆ ಹೆಗಲು ಮುಟ್ಟಿ ನೋಡಿಕೊಂಡಿದ್ದಳಂತೆ"**

ಕಳ್ಳತನ ಮಾಡಿದಾಗ ಸಾಕ್ಷಿದಾರಳಾಗಿ ಸಾಕ್ಷಿಯನ್ನು ಕರೆಸಿರುತ್ತಾರೆ. ಸಾಕ್ಷಿ ಹೇಳುವಂತಹ ಸಾಕ್ಷಿಯವಳೆ ಆ ವಸ್ತುವನ್ನು ಕದ್ದಿರುತ್ತಾಳೆ. ತನ್ನ ತಪ್ಪಿನ ಅರಿವಾಗಿ ತಾನೇ ಆ ಕಳ್ಳತನ ಮಾಡಿದ್ದು ಎಂದುಕೊಂಡು ತನ್ನ ಮನನಕ್ಕೆ ತಂದುಕೊಂಡು ಹೆಗಲು ಮುಟ್ಟಿಕೊಂಡು ತಾನು ಆ ಕಳ್ಳತನ ಮಾಡಿಲ್ಲವೆಂದು ಸಾಧಿಸುತ್ತಾಳೆ. ಸಾಕ್ಷಿಯು ನುಣಚಿಕೊಳ್ಳುವ ಪರಿಯನ್ನು ಸೂಚಿಸುತ್ತವೆ.

**೪೯. " ಅಲ್ಲಿ ಹಾರಾಣ್ಣ ಇಲ್ಲಿ ತೋರಣ್ಣ"**

ಈ ಗಾದೆಯು ಆಶ್ವಾಸನೆ ನೀಡು ರಾಜಕೀಯ ವ್ಯಕ್ತಿಯಂತೆ. ಒಂದು ಸ್ಥಳದಲ್ಲಿ ನೆಲೆ ನಿಂತು ಒಂದು ಕೆಲಸವನ್ನು ಅಚ್ಚುಕಟ್ಟಾಗಿ ಮಾಡದಿದ್ದ ಸಂದರ್ಭದಲ್ಲಿ ಈ ಮಾತು ಬಳಕೆಯಾಗುತ್ತದೆ. ಒಂದು ಕೆಲಸವನ್ನು ಅಚ್ಚುಕಟ್ಟಾಗಿ ಸಂಪೂರ್ಣವಾಗಿ ಮುಗಿಸದಿದ್ದ ಪರಿಯನ್ನು ಸೂಚಿಸುತ್ತದೆ. ಮನುಷ್ಯನ ಮಳ್ಳುತನ ಕೆಲಸ ಮಾಡದ ತಟವಟ–ತನಗಳನ್ನು ಈ ಗಾದೆ ಸೂಚಿಸುತ್ತದೆ.

**೫೦. "ಹುಯ್ಯುವುದಕ್ಕೆ ಮಳೆಯಿಲ್ಲ ಕಾಯುವುದಕ್ಕೆ ಬಿಸಿಲಲ್ಲಿ"**

ಮಳೆಯು ಸರಿಯಾಗಿ ಬರುತ್ತಿಲ್ಲ ಅರ್ಧಂಬರ್ಧ ತುಂತುರು ಮಳೆಯಾಗುವ ಸಂದರ್ಭದಲ್ಲಿ ಬಳಸುತ್ತಾರೆ ಇತ್ತ ಮಳೆಯು ಸರಿಯಾಗಿ ಆಗುತ್ತಿಲ್ಲ. ಅತ್ತ ಬಿಸಿಲು ಇಲ್ಲದ ಪರಿಸ್ಥಿತಿ. ಮೋಡ ಕವಿದ ವಾತಾವರಣವನ್ನು ಸೂಚಿಸುತ್ತದೆ. ರೈತರ

ಆಕ್ರೋಶಕ್ಕೆ ತುತ್ತದಾಗ ಪ್ರಕೃತಿಯ ಒಂದು ಅಂಶವಾದ ಮಳೆಯನ್ನು ಹಿಯ್ಯಗೆಳೆಯುತ್ತಾರೆ. ಸಂಪೂರ್ಣವಾಗಿ ಮಳೆಯಾಗಬೇಕು ಇಲ್ಲ ಸಂಪೂರ್ಣ ಬಿಸಿಲು ಬೀಳಬೇಕು. ಎರಡೂ ಅರ್ಧಂಬರ್ಧ ಪರಿಸ್ಥಿತಿ ರೈತರ ಆಕ್ರೋಶಕ್ಕೆ ಕೋಪಕ್ಕೆ ತುತ್ತಾಗಿದೆ.

**೩೧. "ಊರು ಹೋಗು ಅನ್ನುತ್ತೆ ಕಾಡು ಬಾ ಅನ್ನುತ್ತೆ"**

ಮನುಷ್ಯ ಹುಟ್ಟಿದ ಮೇಲೆ ಸಾಯುವುದು ಸಹಜ ಕ್ರಿಯೆ. ಸಾವಿನ ಹಂಚಿನಲ್ಲಿರುವ ವೃದ್ಧ ಮನುಷ್ಯರು ಈ ಮಾತನ್ನು ಬಳಸುತ್ತಾರೆ. ಊರು ಜನನಿಬಿಡ ಪ್ರದೇಶವಾಗಿದ್ದು ಕಾಡು ಜನವಾಸವನ್ನು ನಿಷಿದ್ಧ ಮಾಡಿರುವ ಪ್ರದೇಶ. ಮನುಷ್ಯ ತನ್ನ ಇಡೀ ಜೀವಮಾನದ ಸುಖದುಃಖಗಳನ್ನು ಅನುಭವಿಸುವುದು ಊರಿನಲ್ಲಿ ಮನುಷ್ಯನನ್ನು ಸೃಷ್ಟಿಸಿದ ಪ್ರಕೃತಿ ಸೃಷ್ಟಿಯ ಕಡೆಗೆ ಪಯಣ ಹುಟ್ಟು-ಸಾವು ಅನಿವಾರ್ಯವಾದುದು ಎಂಬುದನ್ನು ತಿಳಿಸುತ್ತದೆ.

**೩೨. "ನುಂಗಲಾರದ ತುತ್ತು ಉಗಳಕ್ಕೂ ಆಗಲ್ಲ ನುಂಗಕ್ಕೂ ಆಗಲ್ಲ."**

ಪರಿಸ್ಥಿತಿಯ ಇಕ್ಕಟ್ಟನ್ನು ಪ್ರತಿಬಿಂಬಿಸುತ್ತದೆ. ಬಿಸಿಯ ತುತ್ತನ್ನು ಬಾಯಿಗೆ ಹಾಕಿಕೊಂಡರೆ ಅದನ್ನು ನುಂಗಲೂ ಆಗುವುದಿಲ್ಲ ಉಗಳಕ್ಕೂ ಆಗುವುದಿಲ್ಲ. ತಾಳ್ಮೆ ಮನುಷ್ಯನಿಗೆ ಬಹಳ ಮುಖ್ಯ ಎಂಬುವನು ತಿಳಿಸುತ್ತದೆ. ಪರಿಸ್ಥಿತಿಯನ್ನು ಒಪ್ಪಿಕೊಳ್ಳುವ ಮುಂಚೆ ಯೋಚಿಸಬೇಕು, ಆದರೆ ಒಪ್ಪಿಕೊಂಡಮೇಲೆ ಕಷ್ಟನೋ ಸುಖವೋ ಅದನ್ನು ಅನುಭವಿಸಬೇಕಾಗುತ್ತದೆ.

**೩೩. " ಮನೆ ನೋಡಿ ಹೆಣ್ಣು ಕೊಡು ಹದ ನೋಡಿ ನೋಡಿ ಬಿತ್ತು."**

ಸಂಬಂಧವನ್ನು ಬೆಳೆಸುವ ಬಗೆಯನ್ನು ತಿಳಿಸುತ್ತದೆ. ಹೆಣ್ಣನ್ನು ಮದುವೆ ಮಾಡುವಾಗ ಗಂಡಿನ ಮನೆಯಲ್ಲಿ ಉತ್ತಮವಾಗಿದ್ದಾರಾ ಎಂದು ಪರೀಕ್ಷೆ ಮಾಡಬೇಕು. ಗಂಡಿನ ಮನೆಯ ಸ್ಥಾನಮಾನ ಆಸ್ತಿ ಅಂತಸ್ತು ಉತ್ತಮವಾಗಿರಬೇಕೆಂದು ಹೇಳುತ್ತದೆ. ಅದೇ ರೀತಿ ಒಂದು ಬೀಜ ಮೊಳಕೆಯೊಡೆದು ಫಲವತ್ತಾದ ಫಸಲು ನೀಡಲು ಬೀಜಕ್ಕೆ ಸರಿಯಾದ ವಾತಾವರಣ,ಫಲವತ್ತಾದ ಮಣ್ಣನ್ನು ಒದಗಿಸಬೇಕು. ಮುಂದಿನ ಜನಾಂಗವನ್ನು ಜಗತ್ತಿಗೆ ಕೊಡುವ ಹೆಣ್ಣಿನ ಮನಸ್ಸು ಮುದಗೊಳಿಸುವ ರೀತಿ ಇರಬೇಕು.

**೩೪. "ಹುಡುಗಿ ಹುಡುಗಲ್ಲ ಹುಡುಗನ ಹೆಂಡತಿ ಗರ್ತಿಯಲ್ಲ."**

ವಯಸ್ಸು ಚಿಕ್ಕದು ಅನುಭವ ಕಡಿಮೆ ಎನ್ನುವ ಸಂದರ್ಭದಲ್ಲಿ ಬಳಸುತ್ತಾರೆ. ಸಂಸಾರದ ಅನುಭವಕ್ಕೆ ವಯಸ್ಸಿನ ಮಿತಿ ಇರಬೇಕು. ಅನುಭವ ಪಡೆಯಲು ನಿಗದಿ ವಯಸ್ಸು ಬಹಳ ಮುಖ್ಯ. ಬಹಳ ಚಿಕ್ಕ ವಯಸ್ಸಿನಲ್ಲೇ ಮದುವೆ ಮಾಡುವುದು

ಸರಿಯಲ್ಲ. ಬಹಳ ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡಿದ ಗಂಡ ಹೆಂಡತಿಯರು ಪರಸ್ಪರ ಹೊಂದಾಣಿಕೆ ಕಡಿಮೆಯಾಗಿ ಸಂಸಾರ ವಿರಸಗಳು ಆಗಬಹುದು. ವಯಸ್ಸಿನ ದಂಪತಿಗಳಿಗೆ ಜೀವನ ನಿರ್ವಹಣೆ ಕಷ್ಟ. ಅವರಲ್ಲಿ ಆಕರ್ಷಣೆ ಮಾತ್ರ ಇರುತ್ತವೆ. ಇಂತಹ ವಿರಕ್ತ ಸ್ತ್ರೀಯರು ಹಾದಿ ತಪ್ಪಬಹುದು. ಚಿಕ್ಕವರು ತೆಗೆದುಕೊಳ್ಳುವ ನಿರ್ಧಾರ ಸರಿಯಲ್ಲ ಎಂಬುದನ್ನು ಸೂಚಿಸುತ್ತದೆ.

**೫೫. "ಇದ್ದರೆ ಕಣ್ ಬೇನೆ ಹೋದ್ರೆ ಹೊಟ್ಟೆ ಉರಿ"**

ಮನುಷ್ಯನ ಗುಣಗಳು ಯಾವ ಸಂದರ್ಭ ಹೇಗಿರುತ್ತದೆ ಎಂದು ಹೇಳಲು ಬರುವುದಿಲ್ಲ. ಹೊಟ್ಟೆಕಿಚ್ಚು, ಅಂತಃಕರಣ ಎರಡನ್ನು ಈ ಗಾದೆಯಲ್ಲಿ ನೋಡಬಹುದು. ತನಗಾಗದವರು ಇದ್ದರೆ ಅವರು ಸಾಯುಲಿಲ್ಲ ಎಂದು ಹಿಡಿಹಿಡಿ ಶಾಪ ಹಾಕುತ್ತೇವೆ. ಅದೇ ಅವರು ಸತ್ತರೆ ಕನಿಕರ ಪಟ್ಟು ಕೊಳ್ಳುತ್ತೇವೆ. ಇಲ್ಲಿ 'ಹೊಟ್ಟೆ ಉರಿ' ಎರಡು ಅರ್ಥಗಳನ್ನು ಕೊಡುತ್ತದೆ. ಕರುಣೆ ಮತ್ತು ಹೊಟ್ಟೆ ಕಿಚ್ಚು ಈ ಎರಡು ಅರ್ಥದಲ್ಲಿ ಕರುಣೆಯನ್ನು ಇಲ್ಲಿ ಆಯ್ಕೆ ಮಾಡಿಕೊಳ್ಳಬೇಕು. ಮುಗ್ಧ ಮನಸ್ಸುಗಳು ಜನಪದರು ಎದುರಿದ್ದಾಗ ಜಗಳ ಕದನಗಳನ್ನು ಮಾಡಬಹುದು. ಅದೇ ಕಷ್ಟ ಎಂದಾಗ ಒಗಟ್ಟಿನಿಂದ ಒಂದಾಗುತ್ತಾರೆ.

**೫೬. "ಕಳ್ಳನ ಹೆಂಡತಿ ಯಾವತ್ತಿದ್ರು ಮುಂಡೆ"**

ಕಳ್ಳತನ, ಮೋಸ, ಧಗಾ, ವಂಚನೆ ಮುಂತಾದ ವಂಚನೆಗಳನ್ನು ಮಾಡಬಾರದು ಕೆಟ್ಟ ಕೆಲಸ ಮನುಷ್ಯನನ್ನು ಅಂತಿಮವಾಗಿ ಸಾವನ್ನು ತಂದುಕೊಡುತ್ತದೆ. ಇಂತಹ ಕೆಟ್ಟ ಕೆಲಸ ಮಾಡುವ ಕಳ್ಳ ಹೆಂಡತಿಯ ಸುಮಂಗಲಿತನಕ್ಕೆ ಕೊಡಲಿಯ ಪೆಟ್ಟು ಇರುತ್ತದೆ ಎನ್ನುವುದನ್ನು ಸೂಚಿಸುತ್ತದೆ. ಆದ್ದರಿಂದ ಕಳ್ಳತನ ಮಾಡುವ ಗಂಡನನ್ನು ತಿದ್ದು ಸರಿಮಾಡು ಎನ್ನುವ ಎಚ್ಚರಿಕೆಯ ನುಡಿ. ಕೆಟ್ಟ ಕೆಲಸಕ್ಕೆ ಸಾವು ಕಟ್ಟಿಟ್ಟ ಬುತ್ತಿ.

**೫೭. "ಅಗಸನಿಗೊಂದು ಬಿದ್ದ ಕಲ್ಲು ಪೂಜಾರಿಗೊಂದು ನಿಂತ್ಕಲ್ಲು"**

ಜಾತಿವಾರು ಅವರು ಬಳಸುವ ವಸ್ತುಗಳನ್ನು ಸೂಚಿಸುವ ಸಂದರ್ಭ. ಇಲ್ಲಿ ಅಗಸ ಪೂಜಾರಿಯ ಮನೆ ದೇವರುಗಳು ಒಂದೇ ಅದು ಕಲ್ಲು. ಆ ಕಲ್ಲುಗಳು ಮಲಗಿದ್ದರೆ ಅಗಸ ತನ್ನ ಕುಲಕಸುಬನ್ನು ಮಾಡುತ್ತಾನೆ. ಅದೇ ಕಲ್ಲು ನಿಂತಿದ್ದರೆ ಪೂಜಾರಿ ಹೂ, ಕುಂಕುಮ, ಹಣ್ಣು, ಕಾಯಿ, ಊದುಬತ್ತಿಯಿಂದ ಪೂಜೆಮಾಡುತ್ತಾನೆ. ಇಲ್ಲಿ ಅಗಸ ಮತ್ತು ಪೂಜಾರಿಯ ಕುಲಕಸುಬನ್ನು ಹೇಳುವುದರ ಜೊತೆ ಪ್ರತೀಕ ಒಂದೇ ಕ್ರಿಯೆಯಲ್ಲಿ ಬದಲಾವಣೆ ಇದೆ ಎಂಬುದನ್ನು ತಿಳಿಸುತ್ತದೆ.

**೫೮. "ಜಾತಿಗೆಟ್ಟರು ನೀತಿಗೆಡಬಾರದು"**

ಭಾರತವು ಜಾತಿ, ಮತ, ಧರ್ಮ, ಪ್ರಧಾನವಾದ ರಾಷ್ಟ್ರ. ಎಲ್ಲರೂ ಮತ ಧರ್ಮಕ್ಕೆ ಜಾತಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಜಾತಿ ಆಧಾರಿತ ಕುಲಕಸುಬುಗಳಿಗೆ, ಆಚರಣೆಗೆ ಸದಾ ಸಿದ್ಧರಾಗಿರುತ್ತಾರೆ. ಆದರೆ ನಮ್ಮ ಜನಪದರು ಅಂತಹ ಜಾತಿ ನಾಶ ಹೊಂದಿದರು ಪರವಾಗಿಲ್ಲ, ನೀತಿಯನ್ನು ಕೆಡಬಾರದು. ಜಾತಿಯಿಂದ ತಿರಸ್ಕೃತವಾದರೂ ಪರವಾಗಿಲ್ಲ. ಮನುಷ್ಯನ ಮನುಷ್ಯತ್ವದ ಸದಾಚಾರಗಳು, ಒಳ್ಳೆಯ ಗುಣಗಳು ಮೌಲಿಕ ಸದ್ವರ್ತನೆಗಳನ್ನು ಬಿಡಬಾರದು. ಜಾತಿಗಿಂತ ನೀತಿಯೇ ಮುಖ್ಯ.

**೫೯. "ಆಳು ನೋಡಿ ಅನ್ನ ಹಿಕ್ಕು ಪಾತ್ರೆನೋಡಿ ಭಿಕ್ಷೆ ಹಾಕು"**

ಊಟವನ್ನು ಹಿಕ್ಕುವಾಗ ವ್ಯಕ್ತಿಯ ದೈಹಿಕ ದೇಹ ಮತ್ತು ಪರಿಶ್ರಮವನ್ನು ನೋಡಿ ಊಟವನ್ನು ಬಡಿಸಬೇಕು. ಮೇಲ್ನೋಟಕ್ಕೆ ಈ ಗಾದೆ ಗಾತ್ರವನ್ನು ನೋಡಿ ಊಟವನ್ನು ಬಡಿಸಬೇಕು ಎಂದು ಹೇಳುತ್ತದೆ. ಹಾಗೆಯೇ ದಾನವನ್ನು ಮಾಡುವಾಗಲು ಪಾತ್ರೆಯ ಗಾತ್ರವನ್ನು ನೋಡಬೇಕು. ಆದರೆ ಹಿಂದಿನ ಕಾಲದಲ್ಲಿ ವ್ಯಕ್ತಿಗಳ ಪರಿಶ್ರಮ ವ್ಯಕ್ತಿಗಳಾಗಿದ್ದರು. ವ್ಯಕ್ತಿಯ ದೇಹಗಳೂ ಅಷ್ಟೇ ಬಲಿಷ್ಠವಾಗಿದ್ದವು. ಆ ದೇಹಕ್ಕೆ ಸರಿಯಾದ ತಕ್ಕುದಾದ ಆಹಾರವನ್ನು ನೀಡಬೇಕು. ಇಂದಿನ ಪರಿಸ್ಥಿತಿಗೆ ಹೋಲಿಸಿದರೆ ಫ್ಯಾಷನ್‌ಯುಗ ಸ್ಲಿಮ್‌ಯುಗ ಒಂದು ದೋಸೆ, ಒಂದು ಪ್ಲೇಟ್ ಅನ್ನ, ಒಂದು ಮುದ್ದೆಗೆ ಬಂದಿದ್ದಾರೆ. ಅಂದಿನ ದಿನಗಳಲ್ಲಿ ೩-೪ರೊಟ್ಟಿ ೫-೬ ಮುದ್ದೆಗಳ ಕಾಲವಾಗಿತ್ತು. ಕಾಲಕ್ಕೆ ತಕ್ಕ ಹಾಗೆ ಊಟದಲ್ಲಿ ವ್ಯತ್ಯಾಸವಿದೆ.

**೬೦. "ಅಲಲ ಅನ್ನೋ ಹಳ್ಳಿಮರ ನಂಬಹುದು ಮಳ್ಳಿ ಹಂಗೆ ಇರುವ ಕಳ್ಳಿ ನಂಬುವುದಕ್ಕೆ ಆಗುವುದಿಲ್ಲ"**

ಮನುಷ್ಯನ ಹುಸಾನ ಬುದ್ಧಿ ಕೊಂತಿ ಬುದ್ಧಿ ಜೊತೆಗೆ ವಿಶಾಲ ಮನೋಭಾವ, ನಗೆಮುಖದ ಮನೋಭಾವವನ್ನು ನಂಬಹುದು ನಂಬಬಾರದು ಎಂಬ ಎರಡು ಅಭಿಪ್ರಾಯಗಳನ್ನು ಒಟ್ಟಿಗೆ ಬಿತ್ತರಿಸುತ್ತದೆ. ಮನುಷ್ಯರಲ್ಲಿ ಯಾರನ್ನು ನಂಬಬೇಕು ನಂಬಬಾರದು ಎಂದು ಈ ಗಾದೆ ತಿಳಿಹೇಳುತ್ತದೆ. ಹಳ್ಳಿಯ ಮರವು ವಿಶಾಲತೆಗೆ, ನಗೆಮೊಗಕ್ಕೆ ಸಂಕೇತ. ಹಳ್ಳಿಯ ಮರವು ಎಲ್ಲರಿಗೆ ಕಾಣುವ ಹಾಗೆ ಇರುತ್ತದೆ. ಏನೂ ಗೊತ್ತಿಲದಂತೆ ಇರುವ ಬೇಲಿಯ ಮರೆಯಲ್ಲಿರುವ ಮಳ್ಳಿಗತನದ ಕಳ್ಳಿಯನ್ನು ನಂಬಬಾರದು. ಕಳ್ಳಯ ಹಾಲು ವಿಷ ಅದು ಒಂದು ತೊಟ್ಟು ಕಣ್ಣಿಗೆ ಹಾರಿದರು ಯಮಯಾತನೆಯನ್ನು ಅನುಭವಿಸಬೇಕಾಗುತ್ತದೆ. ಅದೇ ರೀತಿ ಮನುಷ್ಯ

ಸ್ವಭಾವಗಳಲ್ಲಿ ಯಾವಾಗಲೂ ನಗೆ ಮೊಗದ ನೇರ ನುಡಿಯವರನ್ನು ನಂಬಬೇಕು. ಏನೂ ಗೊತ್ತಿಲ್ಲದಂತೆ ಸುಮ್ಮನಿರುವ ಮನುಷ್ಯರನ್ನು ನಂಬಬಾರದು.

**೬೧. "ಹಾಕ ಕೊಳ್ಳಿ ಹಾಕ್ಕೊಂಡು ಲೋಕ ಬೆಳ್ಳಗಾತಂತೆ"**

ಅಡುಗೆ ಮಾಡುವ ಸಂದರ್ಭದಲ್ಲಿ ಬಳಸುತ್ತಾರೆ. ಅಡುಗೆ ಮಾಡುವಾಗ ಎರಡೇ ಎರಡು ಕೊಳ್ಳಿಯನ್ನು ಹಾಕಿಕೊಂಡು ತುಂಬಾ ಸಮಯದ ತನಕ ಅಡುಗೆ ಮಾಡಿದ್ದಳಂತೆ ಆಗ ಈ ಮಾತನ್ನು ಹೇಳುತ್ತಾರೆ. ನಿಧಾನಗತಿಯ ಕೆಲಸ ಒಳ್ಳೆಯದಲ್ಲ. ಆ ರೀತಿಯ ಕೆಲಸ ಹೆಚ್ಚಿನ ಸಮಯವನ್ನು ಹಿಡಿಯುತ್ತದೆ. ರಾತ್ರಿ ಅಡುಗೆ ಮಾಡುವ ಕೆಲಸ ಬೆಳಗು ಮೂಡುವವರೆಗೆ ಆಗುತ್ತದೆ ಎಂದು ಮೂದಲಿಕೆಯ ಮಾತು.

**೬೨. "ರೋಗಿಯಾದ ಅರಸನಿಗೆ ಅರಮನೆ ಇದ್ದರು ಸುಖವಿಲ್ಲ"**

ಮನುಷ್ಯ ಆರೋಗ್ಯ ಸರಿಯಿಲ್ಲದ ಸಮಯದಲ್ಲಿ ಈ ಗಾದೆಯನ್ನು ಬಳಸುತ್ತಾರೆ. ಎಂತಹ ಶ್ರೀಮಂತಿಕೆ ಇದ್ದರೂ ಮನುಷ್ಯ ಆರೋಗ್ಯವಂತನಾಗಿದ್ದರೆ ಪರವಾಗಿಲ್ಲ. ಅದೇ ಆರೋಗ್ಯ ಸರಿಯಾಗಿಲ್ಲವೆಂದರೆ ಆ ಸಿರಿಸಂಪತ್ತೆಲ್ಲಾ ವ್ಯರ್ಥ. ರೋಗಿಯಾದ ಅರಸನಿಗೆ ಅರಮನೆ ಸುಖದಲ್ಲಿದ್ದರೂ ಸುಖ, ಶಾಂತಿ, ನೆಮ್ಮದಿ ಇರುವುದಿಲ್ಲ. ಆರೋಗ್ಯವೇ ಭಾಗ್ಯ, ಆರೋಗ್ಯವೇ ಮನುಷ್ಯ ಜೀವನ ಬಹುಮುಖ್ಯ ಭಾಗ ಎಂಬುದು ಗಮನಾರ್ಹ. ಆರೋಗ್ಯವೇ ಮುಖ್ಯ ಎಂಬುದನ್ನು ನಮ್ಮ ಜನಪದರು ಕಟ್ಟಿಕೊಡುವ ಅನುಭವದ ಸಾರ ಬಹಳ ಮಹತ್ವದ್ದು.

**೬೩. "ರೋಗ ಮನುಷ್ಯನಿಗೆ ಬರ್ದೆ ಮರಕ್ಕೆ ಬರುತ್ತಾ"**

ರೋಗ ಎಂಬುದು ಮನುಷ್ಯನಿಗೆ ಬರುವುದು ಶತಸಿದ್ಧ. ಅದು ಪ್ರಕೃತಿ ಸಹಜಕ್ರಿಯೆ. ಒಂದು ವೇಳೆ ಮರಕ್ಕೆ ರೋಗ ಬಂದರೆ ಅದರ ನೋವು ಸಂಕಟ ನಮಗೆ ಅರಿವಾಗುವುದಿಲ್ಲ. ಗಾದೆಯು ಮನುಷ್ಯನಿಗೆ ಮಾತ್ರ ರೋಗ ಬರುವುದು ಮರಕ್ಕೆ ಬರುವುದಿಲ್ಲ ಎಂಬುದನ್ನು ತಿಳಿಸುತ್ತದೆ. ಆದರೆ ಇತ್ತೀಚಿನ ದಿನಗಳಿಗೆ ತೆಂಗಿನಮರಗಳಿಗೆ ನುಸಿ ಬೀಡೆರೋಗ ಬರುತ್ತಿರುವುದನ್ನು ಕಾಣಬಹುದು.

**೬೪. "ಮೀಸೆ ಮರೆ ನಗಾಡುವ ಗಂಡಸ್ಸುವೆ ಅಳ ಹೆಂಗಸ್ಸುವೆ ನಂಬಬಾರದು"**

ಗಂಡು ಹೆಣ್ಣುಗಳ ಹಾವಭಾವಗಳು, ವರ್ತನೆಗಳು, ನಡವಳಿಕೆಗಳನ್ನು ತಿಳಿಸುತ್ತದೆ. ಮೀಸೆಯ ಮರೆ ನಗಾಡುವ ಹುಸಿನಗೆಯ ಗಂಡಸನ್ನು ಸದಾಕಾಲ ಅಳುವ ಕಣ್ಣೀರಿನ ಮಳೆಗರೆವ ಹೆಣ್ಣನ್ನು ನಂಬಿಕೆಗೆ ಅನರ್ಹರು. ಹೆಣ್ಣು ಸೌಮ್ಯ, ವಿನಯ, ವಿನಮ್ರ, ಲವಲವಿಕೆ ಇವುಗಳಿಂದ ಕೂಡಿರಬೇಕು. ಗಂಡು ಸಾಹಸ, ಧೈರ್ಯ

ಕೂಡಿರಬೇಕು. ಗಂಡಸು ಮತ್ತು ಹೆಂಗಸಿಗೆ ನಗುವ ಮತ್ತು ಅಳುವ ಗುಣಗಳು ಯಾರಿಗೆ ಇರಬೇಕು ಯಾರಿಗೆ ಇರಬಾರದು ಎಂಬುದನ್ನು ಮನನ ಮಾಡುತ್ತವೆ.

**೬೫. "ಒಕ್ಕಲಗಿತ್ತಿಗೆ ಹೊಕ್ಕಳ ತನಕ ತಾಳಿ"**

ಒಕ್ಕಲಿಗರಲ್ಲಿ ಮದುವೆಯಾದ ಹೆಣ್ಣಿಗೆ ಹೊಕ್ಕಳುತನಕ ತಾಳಿ ಇರುತ್ತದೆ ಎನ್ನುವ ಸಂದರ್ಭದಲ್ಲಿ ಬಳಸುತ್ತಾರೆ. ತಾಳಿಯನ್ನು ಒಬ್ಬರು ಗುಂಡಿಗೆಯಿಂದ ಮೇಲ್ಭಾಗಕ್ಕೆ ಧರಿಸಿದರೆ ಮತ್ತೆ ಕೆಲವರು ಗುಂಡಿಗೆಯಿಂದ ಅಥವಾ ಜಠರದಿಂದ ಕೆಳಭಾಗಕ್ಕೆ ಹಾಕಿಕೊಳ್ಳುತ್ತಾರೆ. ಸಾಮಾನ್ಯವಾಗಿ ಒಕ್ಕಲಿಗರಿಗೆ (ಗೌಡರು) ಹೊಕ್ಕಳತನಕ ತಾಳಿಯನ್ನು ಧರಿಸಬೇಕು ಎಂಬುದು ವಿಧಿಬದ್ಧವಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಪ್ಯಾಷನ್‌ಗಾಗಿ ಕುತ್ತಿಗೆ ಮಟ್ಟಕ್ಕೆ ಬಳಸುವುದನ್ನು ಕಾಣಬಹುದು. ಒಕ್ಕಲಿಗರ ಸಂಪ್ರದಾಯದ ಸಂಕೇತವಾಗಿದೆ.

**೬೬. "ಏರಿ ಹಿಂದಕ್ಕೆ ಹೋದ ನೀರು ಯ್ಯಾರತ್ತಿ ಬರುವುದಿಲ್ಲ."**

ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ ಎಂಬಂತೆ ಒಂದು ಸಾರಿ ತೆಗೆದುಕೊಂಡ ನಿರ್ಧಾರ, ಹೊಡೆದುಹೋದ ಬದುಕು, ಆಡಿದ ಮಾತು ಯಾವೂ ಮತ್ತೆ ಹಿಂದಕ್ಕೆ ಬರುವುದಿಲ್ಲ ಎನ್ನುವ ಸಂದರ್ಭದಲ್ಲಿ ಬಳಸುತ್ತಾರೆ. ಹಾಗೆಯೇ ಏರಿಯ ಹಿಂದಕ್ಕೆ ಹೋದ ನೀರು ಮತ್ತೆ ಏರಿಯನ್ನು ಹತ್ತಿ ಹಿಂದಕ್ಕೆ ಕೆರೆಗೆ, ನದಿಗೆ, ಸಮುದ್ರಕ್ಕೆ ಬರುವುದಿಲ್ಲ. ಹಾಗೆಯೇ ಮನುಷ್ಯ ಒಂದು ಸಾರಿ ದುಡುಕಿ ತಪ್ಪುಮಾಡಿದರೆ ಮತ್ತೆ ಒಳ್ಳೆಯ ಮೊದಲಿದ್ದ ಪರಿಸ್ಥಿತಿಗೆ ವಾಪಸ್ಸು ಬರುವುದಿಲ್ಲ. ಮಾಡುವ ಕೆಲಸದಲ್ಲಿ ಘನ ನಿರ್ಧಾರಗಳಲ್ಲಿ ದೃಢತೆ ಇರಬೇಕು. ಕೈತಪ್ಪಿ ಹೋದ ಅವಕಾಶಗಳು, ಮಾನ ಮರ್ಯಾದೆಗಳು ಕಳೆದುಕೊಂಡ ವಸ್ತುಗಳು ಪುನಃ ಕೈಸೇರುವುದಿಲ್ಲ. ಕಳೆದುಕೊಳ್ಳುವುದಕ್ಕೆ ಮುಂಚೆ ಯೋಚಿಸಬೇಕು. ಕಳೆದುಕೊಳ್ಳುವುದಕ್ಕಿಂತ ಪಡೆದುಕೊಂಡು ಉಳಿಸಿಕೊಳ್ಳಬೇಕು.

**೬೭. "ಅಟ್ ಉಣ್ಣೋ ಮಗಳಿಗೆ ಬೆರಕೆ ಸೊಪ್ಪಿನ ಆಟನಾ"**

ಒಂದೇ ಕೆಲಸವಲ್ಲ ಮನುಷ್ಯನಿಗೆ ನಾನಾ ಕೆಲಸ ಕಾರ್ಯಗಳಿವೆ ಎಂಬ ಸಂದರ್ಭದಲ್ಲಿ ಬಳಸುತ್ತಾರೆ. ಯಾವಾಗಲೂ ಅಡುಗೆ ಮಾಡುವ ಹೆಣ್ಣಿಗೆ ಅಡುಗೆಗೆ ಹಣಿಮಾಡಿಕೊಳ್ಳುವುದು. ಅದು ಒಂದೇ ಕೆಲಸ ನಮಗೆ ನಾನಾ ಕೆಲಸಗಳಿವೆ ಎಂಬುದನ್ನು ಸೂಚಿಸುತ್ತದೆ. ಮನುಷ್ಯನ ಕಾರ್ಯ ಒಂದಕ್ಕೆ ಸೀಮಿತವಾಗಿರಬಾರದು, ನಾನಾ ಗುರಿಗಳು, ದೃಷ್ಟಿಗಳು ಇರಬೇಕು.

**೬೮. " ಯಾಕೆ ಅಳುತ್ತೀಯ ಮಗಳೆ ಅಂದರೆ ಲೋಕ ಮೆಚ್ಚಕ್ಕೆ".**

ಈ ಗಾದೆಯು ಹಾಸ್ಯಾಸ್ಪದ ಗಾದೆಯಾಗಿ ಮೂಡಿ ಬಂದಿದೆ. ಮಗಳನ್ನು ಮದುವೆ ಮಾಡಿ ಕಳುಹಿಸುವಾಗ ಯಾಕೆ ಅಳುತ್ತಿದ್ದೀಯ ಮಗಳೇ? ಎಂದು ತನ್ನ

ತಂದೆ ಯಾರಾದರೂ ಪ್ರಶ್ನೆ ಮಾಡಿದಾಗ ಮಗಳ ಪ್ರತ್ಯುತ್ತರವಾಗಿ ಲೋಕದಲ್ಲಿ ಇರುವ ಜನರನ್ನು ಮೆಚ್ಚಿಸುವುದಕ್ಕೆ ಎಂದು ಹೇಳುತ್ತಾಳೆ. ಅಂದರೆ ದುಃಖವೆಂಬುದು ಆಂತರಿಕವಾಗಿ ಇಲ್ಲ ಬಾಹ್ಯವಾಗಿ ತೋರಿಸುವುದಕ್ಕೆ ನಾವು ನಮಗೋಸ್ಕರ ಬದುಕು ನಡೆಸದಿದ್ದರೂ ಲೋಕದ ಜನತೆಯನ್ನು ಮೆಚ್ಚಿಸುವ ದೃಷ್ಟಿ ಇರಬೇಕು ಎಂಬುದು ಸೂಚ್ಯ.

**೬೯. " ದೊಡ್ಡವ್ರ ಮನೆ ಊಟ ಸಿಕ್ಕಿದವರಿಗೆ ಸೀರುಂಡೆ".**

ಸಮಾಜದಲ್ಲಿ ಶ್ರೀಮಂತರು ಬಡವರು ಎಂಬ ಎರಡು ವರ್ಗಗಳಿದ್ದು, ಬಡವರು ಮೂಲತಃ ಹಣವಿಲ್ಲದವರು. ಆದರೂ ಬಡವರು ಯಾವುದೇ ಸಮಾರಂಭಗಳಾಗಲಿ ಮದುವೆಯಾಗಲಿ ಸಾಲ ಸೋಲ ಮಾಡಿಯಾದರೂ ಜನರಿಗೆ ಹೊಟ್ಟೆ ತುಂಬಾ ಎಲ್ಲರಿಗೂ ಉಣಬಡಿಸುತ್ತಾರೆ. ಆದರೆ ಶ್ರೀಮಂತರು ಸಭೆ ಸಮಾರಂಭಗಳು ಮಾಡಿದಾಗ ಅವರ ಮನೆ ಊಟ ಮೊದಲು ಹೋದವರಿಗೆ ಮಾತ್ರ ಸಿಗುತ್ತದೆ. ಸಿಕ್ಕಿದರೆ ಅದು ಅದೃಷ್ಟ ಇಲ್ಲವಾದರೆ ಹಸಿದುಕೊಂಡು ಬರಬೇಕಾಗುತ್ತದೆ. ಶ್ರೀಮಂತಿಕೆ ಎನ್ನುವುದು ಕೊಡುವ ಊಟದಲ್ಲಿ ದಾನದಲ್ಲಿ ಇರಬೇಕು. ಶ್ರೀಮಂತಿಕೆ ಎನ್ನುವುದು ಔದಾರ್ಯ ಆದರ್ಶವನ್ನು ಮೆರೆಯಬೇಕು.

**೭೦. " ಗಂಡ ಹೆಂಡತಿ ಜಗಳ ಉಂಡು ಮಲಗುವತನಕ".**

ಈ ಗಾದೆ ಜನಪದರ ಔದಾರ್ಯ ಉನ್ನತ ಆದರ್ಶಮಯ ಜೀವನಕ್ಕೆ ತಿಳುಗನ್ನಡಿ. ಜೀವನ ಸಾಮರಸ್ಯದಿಂದ ಕೂಡಿರಬೇಕೆಂದು ಅವರ ಹಿತನುಡಿ. ಅದರಲ್ಲಿಯೂ ಗಂಡ ಹೆಂಡತಿಯರ ಬದುಕು ಹಾಲು ಜೇನಿನಂತೆ ಬೆರೆತಿರಬೇಕು. ಒಳ್ಳೆಯ ಸಂಸಾರದಲ್ಲಿ ಜಗಳವಿರುತ್ತದೆ. ಆ ಜಗಳ ಕ್ಷಣಿಕವಾಗಿರಬೇಕು, ಅದನ್ನು ಬೆಳೆಸುವುದಕ್ಕೆ ಹೋಗಬಾರದು. ಪರಸ್ಪರ ಜಗಳನ್ನು ಕೂತು ಪರಿಹರಿಸಿಕೊಳ್ಳಬೇಕು. ಆಗಲೇ ಜೀವನದಲ್ಲಿ ಸಾರ್ಥಕ ಬದುಕು ಸಾಧಿಸಲು ಸಾಧ್ಯ. ಗಂಡ–ಹೆಂಡತಿಯ ಜಗಳದ ಸಮಯದಲ್ಲಿ ಬಳಸುತ್ತಾರೆ. ಈ ಗಾದೆ ಅಂದಿನ ಕಾಲಕ್ಕೆ ವೇದವಾಕ್ಯವಾಗಿತ್ತು. ಆದರೆ ಇಂದನ ಕಾಲದಲ್ಲಿ ಗಂಡ ಹೆಂಡತಿಯರ ಜಗಳ ವಿವಾಹ ವಿಚ್ಛೇದನದ ಮಟ್ಟಕ್ಕೆ ಜೀವನದ ಸ್ಥಿತಿಗತಿಗಳಿಗೆ ಬಂದು ತಲುಪಿದೆ. ಗಂಡ ಹೆಂಡತಿಯರಲ್ಲಿ ಪರಸ್ಪರ ಹೊಂದಾಣಿಕೆಯ ಸಮಸ್ಯೆ ಎದ್ದು ಕಾಣುತ್ತದೆ. ಯಾವುದೇ ಜಗಳವಾಗಲಿ ರಾಷ್ಟ್ರ, ದೇಶ, ವ್ಯಕ್ತಿ ಸಂಸಾರದಲ್ಲಿ ಗಂಡಹೆಂಡತಿ ಯಾವುದೇ ಆಗಲಿ ವಿಷಯ ಪರಸ್ಪರ ಜೊತೆ ಕೂಡಿ ಇತ್ಯರ್ಥ ಮಾಡಿಕೊಳ್ಳಬೇಕ. ದ್ವೇಷ ಬೆಳೆಸುವುದು ಸರಿಯಲ್ಲ.

**೭೧. " ಜಾತಿ ಗುಣವೊ ನೀತಿಗುಣವೋ ಕುಂಬಾರ ಮನೆ ಕುಡಿಕೆ ಗುಣವೊ".**

ಅಕ್ಕ ತಂಗಿಯರು, ಅಣ್ಣತಮ್ಮಂಡಿರು, ಸೋದರ–ಸೋದರಿಯರು ಹೊಂದಿ–ಕೊಳ್ಳದ ಸಮಯದಲ್ಲಿ ಈ ಗಾದೆಯನ್ನು ಬಳಸುತ್ತಾರೆ. ವಂಶಪಾರಂಪರ್ಯವಾಗಿ ಬಂದಂತಹ ಮನುಷ್ಯನ ಗುಣವೊ, ನೀತಿ ನಡವಳಿಕೆ ಇಲ್ಲದಿರುವ ಗುಣವೊ, ಕುಂಬಾರರ ಮನೆಯಲ್ಲಿ ಮಾಡುವ ಕುಡಿಕೆಗಳನ್ನು ಮಾಡಿರುವ ರೀತಿಯೋ ಹೊಂದಾಣಿಕೆ ಎನ್ನುವುದು ಮೂಲದಿಂದ ಬಂದಿರಬೇಕು ಎನ್ನುವುದನ್ನು ಸೂಚಿಸುತ್ತದೆ. ಹೊಂದಿಕೊಳ್ಳುವು ಮನಸ್ಸು ಮುಖ್ಯ. ಈ ಹೊಂದಾಣಿಕೆ ಇಲ್ಲದಿರುವುದಕ್ಕೆ ಮೂಲಕಾರಣ ಯಾವುದು ಗೊತ್ತಾಗುತ್ತಿಲ್ಲ. ಅದು ಜಾತಿಯದ್ದೋ ವಂಶದ್ದೋ, ಕಲಿತಿರುವ ಗುಣದ್ದೋ, ನೆರೆಮನೆ ಸಹವಾಸದ್ದೋ ಗೊತ್ತಿಲ್ಲ ಎನ್ನುವ ಸಂದರ್ಭ.

**೭೨. " ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲ"**

ಈ ಗಾದೆಯು ಹೆಣ್ಣು ಮಕ್ಕಳ ನೀತಿ ನಡಾವಳಿಯನ್ನು ತಿಳಿಸುವಾಗ ಹೇಳುತ್ತಾರೆ. ಮನೆಯಲ್ಲಿ ಹಿರಿಯ ಅಕ್ಕ ಗುಣ ನಡತೆಗಳು ಇನ್ನು ಉಳಿದ ತಂಗಿಯರಿಗೆಲ್ಲಾ ಎಂದು ಹಿಯ್ಯಾಳಿಸುತ್ತಾ ಮೂದಲಿಸುತ್ತಾ ಈ ಗಾದೆಯನ್ನು ಬಳಸುತ್ತಾರೆ. ಮನೆಯಲ್ಲಿ ಬರೀ ಹೆಣ್ಣು ಮಕ್ಕಳಿದ್ದು ಅವರಲ್ಲಿ ಮೊದಲನೆಯಕ್ಕ ಕೆಟ್ಟ ಕೆಲಸ ಮಾಡಿದರೆ ಉಳಿದ ಮಕ್ಕಳು ಅದೇ ರೀತಿ ಮಾಡುತ್ತಾರೆ ಎಂದು ಭಾವಿಸುತ್ತಿದ್ದರು. ಒಂದೇ ತಾಯಿ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಒಂದೇ ಗುಣವುಳ್ಳವರು ಅದಕ್ಕೆ ಸಾಕ್ಷಿ ಹಿರಯಕ್ಕ ಎಂದು ಹೇಳುತ್ತಾರೆ. ಆದರೆ ಅದು ಸಾರ್ವಕಾಲಿಕ ಸತ್ಯವಲ್ಲ. ಕೆಲವೊಂದು ಮನೆಯಲ್ಲಿ ಹೆಣ್ಣುಮಕ್ಕಳು ಅಕ್ಕ ತಂಗಿಯರು ಬೇರೆಬೇರೆ ಗುಣ ನಡತೆಗಳನ್ನು ಹೊಂದಿರುತ್ತಾರೆ.

**೭೩. " ನಮ್ಮನೆ ಕದ ಕೊಟ್ಟು ಬೆಳಗೂ ನಾಯಿ ಹೊಡೆದಾಂಗ".**

ದಾನ ಮಾಡುವುದು ಒಳ್ಳೆಯ ಆದರ್ಶಗುಣ. ಆದರೆ ದಾನವನ್ನು ಮಾಡುವಾಗ ದಾನಕ್ಕೆ ವ್ಯಾಪ್ತಿ ಮಿತಿ ಇವಬೇಕು ಎನ್ನುವಾಗ ಬಳಸುತ್ತಾರೆ. ನಮ್ಮತನವನ್ನು ಉಳಿಸಿಕೊಂಡು ನಾವು ಬದುಕಬೇಕು ನೆರೆಹೊರೆಯವರು ಬದುಕು ಎನ್ನುವುದನ್ನು ಸೂಚಿಸುತ್ತದೆ. ಇರುವುದು ಒಂದು ಕದ (ಬಾಗಿಲು) ಅದನ್ನು ಬೇರೆಯವರಿಗೆ ದಾನ ಮಾಡುತ್ತಾರೆ. ಆದರೆ ರಾತ್ರಿಯೆಲ್ಲ ಬರುವ ಬೀದಿನಾಯಿಗಳನ್ನು ಕಳ್ಳಕಾಕರನ್ನು ಕಾಯಬೇಕಾಗುತ್ತದೆ. ಇದು ಸರಿಯಾದ ರೀತಿಯಲ್ಲ ಎಂಬುದನ್ನು ಸೂಚಿಸುತ್ತದೆ.

**೭೪. "ಗಂಡಸಿಗೆ ಚಟ ಇರಬಾರದು ಹೆಂಗಸಿಗೆ ಹಠ ಇರಬಾರದು".**

ಗಂಡಸು- ಹೆಂಗಸು ಹೇಗಿರಬೇಕು ಎಂಬುದನ್ನು ತಿಳಿಸುತ್ತದೆ. ಗಂಡಸು ಒಂದು ಸಾರಿ ಚಟಕ್ಕೆ ಕೆಟ್ಟ ಹವ್ಯಾಸಗಳಿಗೆ ಬಲಿಯಾದರೆ ಮುಗಿಯಿತು. ಆ ಕೆಟ್ಟ ಹವ್ಯಾಸಗಳಿಂದ ಹೊರಬರಲು ಸಾಧ್ಯವಿಲ್ಲ ಅದು ಗಂಡಸಿನ ಅಂಧೋಗತಿಯ ಸಂಕೇತ. ಅದೇ ರೀತಿ ಹೆಣ್ಣಿಗೆ ಹಠಮಾರಿತನ, ಕೊಟ್ಟುತನಗಳು ಇರಬಾರದು. ಅದು ಸಂಸಾರ ಶ್ರೇಯಸ್ಸಿಗೆ ಒಳ್ಳೆಯದಲ್ಲಿ. ಹೆಂಡತಿಗೆ ಚಂಡಿತನ, ಏತಿ ಅಂದರೆ ಪ್ರೇತಿ ಎನ್ನುವ ಗುಣ ಇರಬಾರದು. ಹೆಣ್ಣಿನ ಹಠ ಹಿಂಡಿಂಬಿತನದ ಸಂಕೇತವಾಗಿ ಅದು ನಾಶಕ್ಕೆ ಕಾರಣವಾಗುತ್ತದೆ. ಕೆಟ್ಟ ಗುಣಗಳನ್ನು ಬಿಟ್ಟು ಒಳ್ಳೆಯ ಗುಣಗಳನ್ನು ಸ್ವೀಕರಿಸುವವನೇ ನಿಜವಾದ ಮನುಷ್ಯ.

**೭೫. " ಹೆಂಗಸಿಗೆ ಹೆತ್ಮೆಲೆ ತಿಳಿತು ಗಂಡಸಿಗೆ ಉತ್ಮೆಲೆ ತಿಳಿತು"**

ಗಂಡಸು-ಹೆಂಗಸು ಇಬ್ಬರಿಗೂ ಅರಿವು ಮೂಡುವ ಪರಿಯನ್ನು ತಿಳಿಸುತ್ತದೆ. ಒಂದು ಹೆಂಗಸಿಗೆ ತನ್ನ ಪಾವಿತ್ರ್ಯದ ಅರಿವಾಗಿದ್ದು ಮಗುವನ್ನು ಹೆತ್ತಮೇಲೆ ಮಗು ಹೆತ್ತ ಮೇಲೆ ತನ್ನ ತಾಯಿತನದ ಅರಿವಾಗುತ್ತದೆ. ಅದೇ ರೀತಿ ಗಂಡನಿಗೆ ಹೊಲವನ್ನು ಉತ್ತಮೇಲೆ ತನ್ನ ಜವಾಬ್ದಾರಿಯ ಅರಿವು ಗಂಡಸುತನದ 'ಪೌರುಷತನದ ಅರಿವು ಮೂಡಿತು. ಸೃಷ್ಟಿ ನಿಯಮದ ಪ್ರಕಾರ ಮನುಷ್ಯನಿಗೆ ಬುದ್ಧಿ ಅರಿವು ಮೂಡುತ್ತದೆ.

**೭೬. "ಅಳಿಯನ ಸಿರಿಗೆ ಅತ್ತೆ ತದ್ಲು ಹೊತ್ತುಕೊಂಡು ಕುಣಿದಳಂತೆ"**

ಸಂತೋಷಕ್ಕೆ, ಆಶ್ಚರ್ಯಕ್ಕೆ ಮನುಷ್ಯನ ಹೃದಯ ತಲ್ಲಣಕ್ಕೆ ವ್ಯಕ್ತಪಡಿಸುವಾಗ ಅಡ್ಡಿ ಎಂಬುದು ಇಲ್ಲಬ್ಬೊರು ಸಂತೋಷಕ್ಕೆ ನಕ್ಕು ಬಿಡುತ್ತಾರೆ ಮೊತ್ತೊಬ್ಬರು ಅತ್ತುಬಿಡುತ್ತಾರೆ. ಒಬ್ಬೊಬ್ಬರ ಅಭಿವ್ಯಕ್ತಿ ಒಂದೊಂದು ತೆರನಾಗಿರುತ್ತದೆ. ಇಲ್ಲಿ ತನ್ನ ಮಗಳ ಗಂಡ ಬರುತ್ತಾನೆಂದು ಅತ್ತೆ ತದ್ಲನ್ನು ಹೊತ್ತುಕೊಂಡು ಕುಣಿಯುತ್ತಾಳೆ. ಒಂದು ಅಳಿಯ ಬರುತ್ತಾನೆ ಸಂತೋಷ ಒಂದುಕಡೆ ಮತ್ತೊಂದು ಕಡೆ ಅತ್ತೆ ಯಾಕೆ ಅಳಿಯನ ಸಿರಿಗೆ ತದ್ಲು ಹೊತ್ತುಕೊಂಡು ಕುಣಿಯಬೆಕು ಎಂಬ ಸಂಶಯ ಮೂಡುತ್ತದೆ. ಆದರೆ ಅದೇನೇ ಇದ್ದರು ಹೆಣ್ಣುಮಕ್ಕಳ ಮದುವೆಯಾದರೆ ತಾಯಿಗೆ ಆಗುವ ಸಂತೋಷವನ್ನು ಬಣ್ಣಿಸುವುದಕ್ಕೆ ಪದಗಳೇ ಸಾಲದು.

**೭೭. " ಆನೆ ಗಾತ್ರ ತಿನ್ನದಿಕ್ಕೆ ಆಡುಮರಿ ಅಡ್ವೆ"**

ಆನೆ ಬಹಳ ಶಕ್ತಿಯುತವಾದ ಪ್ರಾಣಿ, ಗಾತ್ರದಲ್ಲಿಯೂ ದಪ್ಪ ಶರೀರದ ಪ್ರಾಣಿ, ಆಡುಮರಿ ಬಹಳ ಚಿಕ್ಕಪ್ರಾಣಿ ಇವೆರಡರ ಹೋಲಿಕೆ ಮಾಡಿರುವುದು ಮನುಷ್ಯನ

ಊಟದ ವಿಚಾರದ ಸಂದರ್ಭದಲ್ಲಿ ಜಾಸ್ತಿ ಊಟ ಮಾಡುವವರಿಗೆ ಸ್ವಲ್ಪ ಊಟ ಹಾಕಿದರೆ ಅದು ಯಾವ ಕಡೆಗೂ ಸಾಲುವುದಿಲ್ಲ. ಊಟದ ಗಾತ್ರವನ್ನು ಆನೆ ಮತ್ತು ಆಡುವವರಿಗೆ ಹೋಲಿಸಿ ಹೇಳಿದ್ದಾರೆ . ಊಟ ಮನುಷ್ಯನ ಗಾತ್ರಕ್ಕೆ ಸಂಬಂಧಿಸಿದೆ.

**೭೮. "ಅತ್ತೆ ಅಗಸನ ಜೊತೆ ಹೋದಳಂತೆ ಸೊಸೆಗೆ ಹೇಳಿದಳಂತೆ ಜೋಪಾನ"**

ಅತ್ತೆ–ಸೊಸೆಯರು ಆ ಜನ್ಮ ಶತ್ರುಗಳ ರೀತಿ ವರ್ತಿಸುವ ರೀತಿಯನ್ನು ಕಾಣಬಹುದು. ಕೆಲವೊಂದು ಮನೆಗಳಲ್ಲಿ ಅತ್ತೆ–ಸೊಸೆಯರು ತಾಯಿ ಮಗಳ ಹಾಗೆ ಹೊಂದಿಕೊಂಡಿರುವ ಅಪರೂಪ ಸಂಗತಿಯನ್ನು ಕಾಣಬಹುದು. ಆದರೂ ಅತ್ತೆ–ಸೊಸೆಗೆ ಬುದ್ಧಿವಾದ ಹೇಳುವುದು ಸರ್ವೇಸಾಮಾನ್ಯವಾದ ವಿಷಯ. ಅತ್ತೆಯೇ ಮಾಡುತ್ತಿರುವುದು ಕೆಟ್ಟ ಕೆಲಸ ತನ್ನ ಮನೆ ಮಕ್ಕಳು ಗಂಡ ಎಲ್ಲರನ್ನು ಬಿಟ್ಟು ಬಟ್ಟೆ ತೊಳೆಯುವ ಅಗಸನ ಜೊತೆ ಹೋಗುತ್ತಿದ್ದಾಳೆ, ಹೋಗುತ್ತಿರುವುದು ಅನ್ಯರ ಜೊತೆ ತನ್ನ ಮಗನ ಹೆಂಡತಿಗೆ ಹೇಳುತ್ತಿದ್ದಾಳೆ ಉಷಾರು ಜವಾಬ್ದಾರಿ ನಿಭಾಯಿಸಿಕೊ ಎಂದು. ಅಂದರೆ ಹೇಳುವ ಬುದ್ಧಿವಾದ ತಲುಪಲು ಬುದ್ಧಿ ಹೇಳುವವರು ಅವರ ಎರಡರಷ್ಟು ಗುಣ, ಶೀಲ, ಜ್ಞಾನಗಳನ್ನು ಹೊಂದರಬೇಕು.

**೭೯. "ಮನೆಕಟ್ಟಿ ನೋಡು ಮದ್ವೆ ಮಾಡಿ ನೋಡು."**

ಮನೆ ಮತ್ತು ಮದುವೆ ಈ ಎರಡು ಕೆಲಸಗಳು ದುಬಾರಿ ವೆಚ್ಚದವು. ಮನೆ ಕಟ್ಟಿ ಮದುವೆ ಮಾಡಿದರೆ ಮನುಷ್ಯ ಜೀವನದಲ್ಲಿ ಬದುಕಿನಲ್ಲಿ ಉತ್ಕಟ ಇಚ್ಛೆಯನ್ನು ಪೂರೈಸಿದ ಹಾಗೆ. ಶ್ರೀಮಂತರಿಗೆ ಮನೆ ಕಟ್ಟುವುದು ಮದುವೆ ಮಾಡುವುದು ಸುಲಭದ ಕೆಲಸ. ಆದರೆ ಅದೇ ಬಡವರಿಗೆ ಜೀವಮಾನವಿಡೀ ಜೀವ ತೈಯ್ದು ಉಳಿಸಿ ಗಳಿಸಿ ಮನೆ ಕಟ್ಟಿ ಮದುವೆ ಮಾಡಬೇಕಾಗಿದೆ. ಇಂದಿನ ದಿನಗಳಲ್ಲಿ ವಸತಿಯ ಬೆಲೆಯೆ ದುಬಾರಿಯಾಗಿದೆ. ಕೆಲವು ಜನರು ಬಾಡಿಗೆ ಮನೆಗಳಲ್ಲಿ ಅಪಾರ್ಟ್‌ಮೆಂಟುಗಳಲ್ಲಿ ಬದುಕುತ್ತಿದ್ದಾರೆ. ಕೆಲವೊಂದು ಕಡೆ ವಸತಿಯ ಸಮಸ್ಯೆ ಎದ್ದು ಕಾಣುತ್ತದೆ. ಅದೇ ರೀತಿ ಮದುವೆ ಒಂದು ಕಡೆ ಒಪ್ಪಿತವಾಗಿ ಸಾಂಪ್ರದಾಯಿಕವಾಗಿ ಮಾಡುತ್ತಿದ್ದರೆ ಮತ್ತೊಂದು ಕಡೆ ಪ್ರೀತಿಯ ರಿಜಿಸ್ಟರ್ ಮದುವೆಗಳು ಆಗುತ್ತಿವೆ. ಮನೆ ಕಟ್ಟುವುದು ವೈಜ್ಞಾನಿಕವಾಗಿ ಬದಲಾದಂತೆ ಮದುವೆಯಲ್ಲಿಯೂ ಮಾರ್ಪಾಟುಗಳಾಗಿವೆ.

**೮೦."ಕಾಸು ಕೊಡಲಿಲ್ಲ ಹೊಗೆಸೊಪ್ಪು ಸುಡಲಿಲ್ಲ"**

ಎಲ್ಲ ವಸ್ತುಗಳು ಪುಕ್ಕಟೆಯಾಗಿ ಸಿಕ್ಕುವ ಸಂದರ್ಭದಲ್ಲಿ ಬಳಸುತ್ತಾರೆ. ಕಾಸು ಕೊಡದೆಯೇ ಕೆಲವೊಬ್ಬರಿಗೆ ಹೊಗೆಸೊಪ್ಪು ಸಿಗುವುದು. ಅವರವರ ಅಧಿಕಾರದಿಂದ,

ಸ್ಥಾನಮಾನದಿಂದ, ಪ್ರೀತಿ ಗೌರವದಿಂದ ವಸ್ತು ಊಟ ಪುಕ್ಕಟೆಯಾಗಿ ಸಿಗುತ್ತವೆ. ಉದಾಹರಣೆ ಹಳ್ಳಿಯ ಗೌಡರು ಎಂದರೆ ಗೌರವ, ಭಯ, ಭಕ್ತಿ. ಬಡವರು ಬೆಳೆದ ವಸ್ತುಗಳಲ್ಲಿ ಗೌಡರ ಮನೆಗೆ ಪುಕ್ಕಟೆಯಾಗಿ ಬರುತ್ತದೆ. ಅದೇ ಪೋಲೀಸರಿಗೂ ಅವರ ಅಧಿಕಾರದಿಂದ ದಬ್ಬಾಳಿಕೆಗೆ ವಸ್ತುಗಳು ಪುಕ್ಕಟೆಯಾಗಿ ಸಿಗುತ್ತದೆ.

**೮೧. "ಹೆಣ್ ಹೆಚ್ಚಿದ ಮನೆಹಾಳು ಅಣ್ಣೆ ಸೊಪ್ಪು ಹೆಚ್ಚಿದ ಹೊಲ ಹಾಳು".**

ಹೆಣ್ಣು ಮಕ್ಕಳು ಹೆಚ್ಚಿಗೆ ಇರುವವರ ಮನೆಯಲ್ಲಿ ಸಾಮಾನ್ಯವಾಗಿ ಆಡುವ ಕಿಡಿನುಡಿ. ಇದು ಮೂದಲಿಕೆಯ ಮಾತು ಹೌದು. ಹೆಣ್ಣುಮಕ್ಕಳು ನಾನು ಆ ಕೆಲಸ ಮಾಡಿದೆ. ನಾನು ಈ ಕೆಲಸ ಮಾಡಿದೆ ಎಂದು ಯಾವಾಗಲೂ ಕದನವನ್ನು ಮಾಡುತ್ತಾರೆ. ಹೆಣ್ಣು ಮಕ್ಕಳು ಕೂಡಿ ಹೊಂದಾಣಿಕೆಯಿಂದ ಇರುವುದಿಲ್ಲ. ಅದೇ ರೀತಿ ಅಣ್ಣೆಸೊಪ್ಪು ಬೆಳೆದರೆ ಬೆಳೆ ನಾಶವಾಗುತ್ತದೆಂದು ಹೋಲಿಕೆಯಾಗಿ ನೀಡಿದ್ದಾರೆ. ಆದರೆ ಹೆಣ್ಣುಮಕ್ಕಳು ಮನೆ ಬೆಳಗಿಸುವ ನಂದಾ ದೀಪಗಳು.

**೮೨. "ಹಗಲೆಲ್ಲಾ ಹಾರಾಟ ಗಂಡ ಬಂದಾಗ ಕುಟ್ಟಾಟ"**

ಹೆಂಡತಿ ಗಂಡ ಬಂದಾಗ ಮನೆಯ ಕೆಲಸವನ್ನು ಮಾಡುತ್ತಾಳೆ. ಹೆಂಡತಿ ಬೆಳಗಿನಿಂದ ಸಂಜೆಯತನಕ ನೆರೆಮನೆಗೆ ಬಂದು ಆಗ ಮನೆಯ ಕೆಲಸ ಕಾರ್ಯಗಳಲ್ಲಿ ತೊಡಗುತ್ತಾನೆ. ತನ್ನ ಗಂಡ ಮನ ಮೆಚ್ಚಿಸುವ ಸಲುವಾಗಿ ತಾನು ಇಡೀ ಸಂಸಾರದ ಕೆಲಸವನ್ನು ಕಷ್ಟಪಟ್ಟು ಮಾಡುತ್ತಿದ್ದೇನೆಂದು ನಟಿಸುತ್ತಾಳೆ. ಆಗ ಒಂದು ಭತ್ತ ರಾಗಿಯನ್ನು ಕುಟ್ಟುತ್ತಾಳೆ. ಮನ ಒಲಿಸುವ ಮೆಚ್ಚಿಸಲು ಕೆಲಸಕಾರ್ಯಗಳನ್ನು ಮಾಡುವ ಸಂದರ್ಭದಲ್ಲಿ ಬಳಸುತ್ತಾರೆ. ತೋರಿಕೆಯ ಕೆಲಸಕ್ಕಿಂತ ಮನತೃಪ್ತಿಯ ಕೆಲಸ ಒಳ್ಳೆಯದು.

**೮೩. "ಒಂದು ಕಡ್ಗ ಒಂದು ಹುಡುಗು"**

ದುಡ್ಡು ಇದ್ದರೆ ಮದುವೆ ಮುಂಜಿಯ ಕೆಲಸ ಮಾಡಬಹುದು. ಮದುವೆ ಮಾಡಲು ಹಣವಿಲ್ಲದ ಸಂದರ್ಭದಲ್ಲಿ ಒಂದು ಬಳೆ ಮಾಡಿಸಿ ಒಂದು ಹುಡುಗನಿಗೆ ಮದುವೆ ಮಾಡುತ್ತಾರೆ. ತಮಗೆ ಮದುವೆ ಮಾಡಲು ಅಷ್ಟೇ ಸಾಮರ್ಥ್ಯ ಎಂದು ಸೂಚಿಸುತ್ತಾರೆ. ಅಂದರೆ ಸಕಲ ವಸ್ತ್ರ ಒಡವೆಯನ್ನು ಕೊಟ್ಟು ಮದುವೆ ಮಾಡಲು ಆಗದಿದ್ದರೂ ಒಂದು ಖಡ್ಗವನ್ನು ಅಥವಾ ಒಂದು ಬಳೆಯನ್ನು ಕೊಡುವ ಸಾಮರ್ಥ್ಯ.

**೮೪. "ದಾಸಯ್ಯ ಬಗೆಸಿದ್ದನಂತೆ ಬಸ್ಸಾರದಳ"**

ಮನೆ ಮನೆ ಭಿಕ್ಷೆ ಎತ್ತಿ ಜೀವನ ನಡೆಸುವ ವೃತ್ತಿಯವನು ದಾಸಯ್ಯ. ದಾಸಯ್ಯನಿಗೆ ಮೊದಲೇ ಕಷ್ಟಪಟ್ಟು ದುಡಿಮೆ ಮಾಡಲು ಮನಸ್ಸಿಗೆ ಒಪ್ಪದ ಮಾತು.

ಗಾದೆಯು ಮೊದಲಿಗೆ ಅಶ್ಲೀಲತೆಯನ್ನು ಪ್ರದರ್ಶಿಸಿದರೂ ಅದರ ಆಂತರ್ಯ ಅರ್ಥ ಯಾವುದೇ ರೀತಿ ಕಷ್ಟಪಡಬಾರದು. ಅದು ಸುಲಭವಾಗಿ ದಕ್ಕುವಂತೆ ಇರಬೇಕು. ಶ್ರಮಪಟ್ಟು ದುಡಿಯುವುದು ಒಳ್ಳೆಯದು ಸುಲಭ ಪ್ರಯತ್ನಕ್ಕೆ ಆಸೆಪಟ್ಟ ದಾಸಯ್ಯನ ಬಯಕೆಯಂತೆ ಬಳಸಿದ ವಸ್ತುಗಳನ್ನು ಪಡೆಯಬೇಕಾಗುತ್ತದೆ. ಕಷ್ಟಪಡದೆ ಅದೃಷ್ಟ ಬಯಕೆ.

**೮೫. "ಬಾಗಲಲ್ಲಿ ಹೋಗದನ್ನ ಬಿಟ್ಟಿದ್ದರಂತೆ ಬಚ್ಚಲು ಕಂಡಿಗೆ ಬಟ್ಟೆ ಗಿಡಿಗಿದರಂತೆ"**

ಅಪಾರ ನಷ್ಟ ಆಗುತ್ತಿರುವುದನ್ನು ಬಿಟ್ಟು ಸ್ವಲ್ಪ ನಷ್ಟ ಆಗುವ ಕಡೆಗೆ ಹೆಚ್ಚಿನ ಗಮನಹರಿಸುವ ಸಂದರ್ಭದಲ್ಲಿ ಬಳಸುತ್ತಾರೆ. ಬಾಗಿಲ ಕಂದರ ಬಹಳ ದೊಡ್ಡದು. ಅದೇ ಬಚ್ಚಲು ಕಂಡಿಯ ಕಂದರ ಕಿರಿದು. ಬಾಗಿಲ ಕಂದರದಲ್ಲಿ ಆಗುವ ನಷ್ಟ ಅಪಾರ ಅದೇ ಬಚ್ಚಲು ಕಂಡಿಯಲ್ಲಿ ಆಗುವ ನಷ್ಟ ಬಾಗಿಲ ಕಂದರಕ್ಕಿ ತೃಣಮಾತ್ರ. ಮನುಷ್ಯ ಹೆಚ್ಚಿನ ನಷ್ಟಕ್ಕಿಂತ ತೃಣಮಾತ್ರ ನಷ್ಟಕ್ಕೇ ದುಃಖಿಸುತ್ತಾನೆ, ಕೊರಗುತ್ತಾನೆ, ಚಿಂತಿಸುತ್ತಾನೆ ಎಂದು ತಿಳಿಸುತ್ತದೆ.

**೮೬. "ವಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು"**

ಗಂಡ-ಹೆಂಡತಿಯ ಜೀವನ ಸಕಲ ಐಶ್ವರ್ಯಗಳಲ್ಲಿ ಒಂದು. ಗಂಡು ಹೆಣ್ಣು ಪರಸ್ಪರ ಒಪ್ಪಿ ಮದುವೆ ಆಗಬೇಕು. ಆದರೆ ಗಂಡು ಹೆಣ್ಣು ಪರಸ್ಪರರಲ್ಲಿ ಹೊಂದಾಣಿಕೆ ಇಲ್ಲದೆ ಮದುವೆಯಾಗಿದ್ದರೆ ಅದರಂತಹ ನರಕದ ಜೀವನ ಮತ್ತೊಂದಿಲ್ಲ. ಇಷ್ಟ ಇಲ್ಲದ ಗಂಡನಿಗೆ ಮೃಷ್ಟಾನ್ನ ಬೋಜನ ಮಾಡಿದರು ತಿರಸ್ಕೃತ. ಇಲ್ಲಿ ಗಂಡನಿಗೆ ಹೆಂಡತಿ ಕಂಡರೆ ಸ್ವಲ್ಪವೂ ಇಷ್ಟವಿಲ್ಲ. ಅಂತಹ ಸಂದರ್ಭ ಮೊಸರಿನಲ್ಲಿ ಕಲ್ಲು ಎಂದರೆ ಅದು ಸಾಧ್ಯವಿಲ್ಲದ ಮಾತು. ಇಷ್ಟ ಇದ್ದವಿದ್ದವರು ಪ್ರೀತಿಯಿಂದ ಏನು ಕೊಟ್ಟರು ಪಂಚಾಮೃತ. ಇಷ್ಟವಿಲ್ಲದವರು ಕೊಟ್ಟರೆ ಇಲ್ಲ ಸಲ್ಲದ ಆರೋಪ ಕಾರಣಗಳನ್ನು ಹುಡುಕುತ್ತಾರೆಂದು ಸೂಚಿಸುತ್ತದೆ.

**೮೭. "ಬಾಳ್ನಾರದ ಮುಕ್ಕ ಬಾಯಿ ಒಡಕಂತೆ ತಾಳ್ನಾರದ್ದು ತಿಗಾ ಬಡಕಂತೆ"**

ಮನುಷ್ಯ ಮನುಷ್ಯನ ನಡುವೆ ದ್ವೇಷ ಮತ್ಸರ ಅಸೂಯೆ, ದುಷ್ಟ ವರ್ತನೆಗಳನ್ನು ಕಾಣಬಹುದು. ಒಬ್ಬರು ಆಸ್ತಿ ಅಂತಸ್ತು ಮಾಡಿಕೊಂಡು ಮುಂದುವರೆದರೆ ಅದನ್ನು ನೋಡಿ ಸಹಿಸದಿದ್ದಾಗ ಈ ಮಾತನ್ನು ಬಳಸುತ್ತಾರೆ. ನಾವು ಮುಂದುವರೆಯೋಣ ಒಳ್ಳೆಯ ಬದುಕು ನಡೆಸೋಣ ಎಂದು ಅಂದುಕೊಳ್ಳುವುದಿಲ್ಲ. ಅವರು ಬದುಕುವ ರೀತಿ ಬದುಕುವುದಕ್ಕೆ ಆಗುತ್ತಿಲ್ಲವೆಂದು ಸಹಿಸಿಕೊಳ್ಳಲು ಆಗದ ಜನ ಅವರಿಗೆ ಕಿರುಕುಳದ ನುಡಿಗಳನ್ನು ಆಡುತ್ತಾರೆ.

ಬೇರೆಯವರು ಬದುಕುವುದನ್ನು ನೋಡಿ ಸಹಿಸಿಕೊಳ್ಳಲಾಗದ ತಡೆದುಕೊಳ್ಳಲಾಗದಿದ್ದಾಗ ಬಳಸುತ್ತಾರೆ.

**೮೮. "ತಾನು ತಿನ್ನದೆ ತೌಡಂತೆ ವಾರಕ್ಕೆ ಹಂದಿ ಸಾಕಿದ್ಲಂತೆ"**

ತನಗೆ ಇಲ್ಲದಿದ್ದಾಗ ತನ್ನ ಕೆಲಸಕ್ಕೆ ಬಾರದಿದ್ದವರು ಮತ್ತೊಂದು ಎಂದಾಗ ಬಳಸುತ್ತಾರೆ. ತನಗೆ ತಿನ್ನುವುದಕ್ಕೆ ಇಲ್ಲ ಅಂತಹ ಸಮಯದಲ್ಲಿ ಬೇರೆಯವರ ಮನೆಯ ಹಂದಿಯನ್ನು ಸಾಕಿಕೊಂಡಿದ್ದಳು. ತಾನೇ ನಿಕೃಷ್ಟ ಜೀವನವನ್ನು ನಡೆಸುತ್ತಿದ್ದು ತನ್ನ ಆಹಾರವೇ ಹಂದಿ ತಿನ್ನುವ ತೌಡಿನಂತೆ ಕಳಪೆಹೀನವಾಗಿದೆ. ತನಗೆ ಆಹಾರ ಹುಡುಕಿಕೊಂಡರೆ ಸಾಕು ಎನ್ನುವ ಪರಿಸ್ಥಿತಿಯಲ್ಲಿ ತನಗಿಂತ ಹೆಚ್ಚಿನದಾಗಿ ತಿನ್ನುವ ಪ್ರಯೋಜನಕ್ಕೆ ಬಾರದ ಪ್ರಾಣಿ ಬೇಡವೆಂದು ಸೂಚಿಸುತ್ತದೆ.

**೮೯. "ಕೂತು ಉಂಡರೆ ಕುಡಿಕೆ ಹಣನೂ ಸಾಲದಂತೆ"**

ಕಷ್ಟ ಪಟ್ಟು ದುಡಿಯಬೇಕು ಸೋಮಾರಿತನ ಯಾವುದೇ ಮನುಷ್ಯನಿಗೆ ಒಳ್ಳೆಯದಲ್ಲ. ಮನುಷ್ಯನಲ್ಲಿ ಕ್ರಿಯಾಶೀಲತೆ, ಪರಿಶ್ರಮ, ಆತ್ಮತೃಪ್ತಿ ಇರಬೇಕು ವ್ಯಕ್ತಿಯಲ್ಲಿ ಆಲಸ್ಯವಾಗಲಿ, ಉದಾಸೀನ ಇರಬಾರದು. ಶ್ರಮಜೀವಿ ಸದಾಸುಖಿ ಶ್ರಮವಿರದ ಬದುಕು ವ್ಯರ್ಥವಾಗುತ್ತದೆ. ನಾನು ಶ್ರೀಮಂತ ಅಪಾರ ಹಣವಿದೆ ಎಂದು ಕೆಲಸ ಮಾಡದೆ ಹೋದರೆ ಇಡೀ ಕುಡಿಕೆ ಹಣವೂ ಸಾಲದಂತೆ, ದಿನೇ ದಿನೇ ಆ ಕಂಡಿಕೆ ಹೆಣ ಕರಗಿ ಖಾಲಿಯಾಗುತ್ತದೆ ಎಂದು ಮುನ್ಸೂಚನೆ ನೀಡುತ್ತದೆ. ಗಂಡಸು ಎಂದ ಮೇಲೆ ದುಡಿಯಬೇಕು. ಅದು ಅವನ ಸ್ಥಾನಕ್ಕೆ ಭೂಷಣ.

**೯೦. "ಹೊಸದರಲ್ಲಿ ನನ್ನ ಗಂಡ ಕಸಹಾಕಿಕೊಡ, ನೀರು ತರಸಿಕೊಡ ಕೊನೆಕೊನೆಗೆ ತಗೊಂಡನಂತೆ ಕಸ್ದಬರ್ಲ್ರಾ"**

ಮದುವೆ ಪ್ರಾರಂಭ ದಿನಗಳ ಅನುಭವ ಘನೀಭೂತವಾಗಿದೆ. ಮದುವೆ ಹೊಸದರಲ್ಲಿ ಗಂಡ ತನ್ನ ಮನೆಗೆ ಬಂದ ಹೆಂಡತಿಯನ್ನು ನೋಡಿಕೊಳ್ಳುವ ರೀತಿ ಒಂದು ಕೆಲಸವನ್ನು ಮಾಡುವುದಕ್ಕೆ ಬಿಡುವುದಿಲ್ಲ. ಒಂದು ಬಿಂದಿಗೆ ನೀರು ಒಂದು ಮಂಕ್ರಿ ಕಸವನ್ನು ಹಾಕಲು ಬಿಡುವುದಿಲ್ಲ. ಅಷ್ಟೊಂದು ಪ್ರೀತಿಯಿಂದ ನೋಡಿಕೊಳ್ಳುತ್ತಾನೆ. ಕೊನೆಕೊನೆಗೆ ಕೆಲಸಮಾಡು ಎಂದು ಕಸದ ಬರ್ಲಿನಲ್ಲಿ ಹೊಡೆಯುವಲ್ಲಿ ಮುಂದಾದನಂತೆ. ಮೊದಲಿನ ಪ್ರೀತಿ ಕಡಿಮೆಯಾಗುತ್ತಾ ಬರುವುದನ್ನು ತಿಳಿಸುತ್ತದೆ. ಮನುಷ್ಯ ಮನಸ್ಸೂ ಬದಲಾವಣೆಗೊಳ್ಳುತ್ತದೆ. ವರ್ತನೆಗಳೂ ಬದಲಾಗುತ್ತದೆ.

**೯೧. "ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಎದ್ದು ಕೊಡೆ ಹಿಡಿದದ್ದನಂತೆ"**

ಮನುಷ್ಯನ ಅರೆಬಿತ್ರತನವನ್ನು ತೋರುತ್ತದೆ. ಮೊದಲು ಕಡು ಬಡತನದಲ್ಲಿ ಯಾವುದೇ ಮೂಲದಿಂದ ಲಾಟರಿಯ ಮೂಲಕ ಹಣ ಬಂದರೆ ಸರಿಯಾದ ಒಳ್ಳೆಯ ಕೆಲಸಕ್ಕೆ ಉಪಯೋಗಿಸಿಬೇಕು. ಮನುಷ್ಯ ಆ ಹಣದಿಂದ ಎಲ್ಲೂ ಇಲ್ಲದ ಸ್ಥಾನಮಾನವನ್ನು ಪ್ರತಿಷ್ಠೆಯನ್ನು ತೋರಿಸುವ ಸಂದರ್ಭದಲ್ಲಿ ಬಳಸುತ್ತಾರೆ. ಒಬ್ಬ ಬಡವ ಮೊದಲು ಪಂಚೆ, ಶರ್ಟ್ ಹಾಕಿಕೊಳ್ಳುವುದು ಮೊದಲಿನ ಸ್ಥಿತಿಯದ್ದು. ಅದೇ ಯಾವುದೋ ಅದೃಷ್ಟ ಕುಲಾಯಿಸಿದಾಗ ಪಂಜೆಯನ್ನು ಬಿಟ್ಟು ಪ್ಯಾಂಟ್ ಹಾಕಿಕೊಳ್ಳುತ್ತಾನೆ. ಈ ಸ್ಥಿತಿ ಅವನ ಸ್ಥಾನಮಾನಕ್ಕೆ ಅಭಾಸವೆನಿಸುತ್ತದೆ. ಅಲ್ಪನಿಗೆ ಕನಸಿನಲ್ಲಿಯೂ ತನ್ನ ಪ್ರತಿಷ್ಠೆಯನ್ನು ತೋರಿಸಲು ಹಂಬಲಿಸುತ್ತಾನೆ. ಮನುಷ್ಯನ ಹುಂಬತನದ ಪ್ರದರ್ಶನವಾಗುತ್ತದೆ. ಮಧ್ಯರಾತ್ರಿಯಲ್ಲಿ ಪ್ರತಿಷ್ಠೆಯ ದ್ಯೋತಕವಾದ ಕೊಡೆಯನ್ನು ಹಿಡಿದು ಪ್ರದರ್ಶಿಸಲು ಪ್ರಯತ್ನಿಸುತ್ತಾನೆ. ಎಷ್ಟೇ ಸಿರಿ ಸಂಪತ್ತು ಐಶ್ವರ್ಯ ಬಂದರೂ ಗುಣ ಮರ್ಯಾದೆಯ ಮುಂದೆ ತೃಣಮಾತ್ರವಾಗುತ್ತದೆ.

**೯೨. "ನಾಯಿ ಮೊಲೆಯಲ್ಲಿ ಹಾಲಿದ್ದರೆ ದೇವರಿಗೂ ಅಲ್ಲ ದಿಂಡ್ರುಗೂ ಅಲ್ಲ"**

ಕೊಡುವ ಮತ್ತು ಕೊಡದಿರುವ ಪ್ರಯೋಜನ ಮತ್ತು ಅಪ್ರಯೋಜನದ ಬಗ್ಗೆ ಈ ಗಾದೆ ಬಹಳ ಸೊಗಸಾಗಿ ಹೇಳುತ್ತದೆ. ನಾಯಿ ಮೊಲೆಯಲ್ಲಿ ಹಾಲು ಕೆಚ್ಚಲ ತುಂಬ ಇದ್ದರೂ ಅದು ಪ್ರಯೋಜನಕ್ಕೆ ಬರುವುದಿಲ್ಲ. ಅದು ತನ್ನ ಮಂಗಳಿಗೆ ಮಾತ್ರ ಅಷ್ಟೇ ಅದೇ ಹಸುವಿನ ಮೊಲೆಯಲ್ಲಿ ಹಾಲು ಇದ್ದರೆ ಆ ಹಾಲು ಡೀ ಜೀವರಾಶಿಗೆ ಉಪಯೋಗಕ್ಕೆ ಬರುತ್ತದೆ. ದೇವರ ನೈವೇದ್ಯಕ್ಕೆ ಮಗುವಿನ ಬೆಳವಣಿಗೆಗೆ, ದೇಹದ ದೃಢತೆಗೆ ಎಲ್ಲದಕ್ಕೂ ಬಳಕೆಯಾಗುತ್ತದೆ. ಅದೇ ನಾಯಿಯ ಮೊಲೆಯ ಹಾಲು ದೇವರ ನೈವೇದ್ಯಕ್ಕೆ ಹೋಗಲಿ ರಾಕ್ಷಸರೂ ಅದನ್ನು ಬಳಸುವುದಿಲ್ಲ. ಹಾಗೆಯೇ ಕೊಡುವ ದಾನಮಾಡುವ ವ್ಯಕ್ತಿಯ ಹತ್ತಿರ ಹಣವಿದ್ದರೆ ಅದು ಎಲ್ಲರ ಕಷ್ಟಸುಖಗಳಿಗೆ ಉಪಯೋಗಕ್ಕೆ ಬರುತ್ತದೆ. ಅದೇ ಹಣ ಜುಗ್ಗನಕೈಯ್ಯಲ್ಲಿದ್ದರೆ ಅದು ಅಪ್ರಯೋಜನ ಎಂದು ಹೇಳುತ್ತದೆ.

**೯೩. "ಮಕ್ಕಳಿಗೆ ಸಿಹಿತೋರಿಸಬಾರದು ಗಂಡನಿಗೆ ಆದಿಕ ತೋರಿಸಬಾರದು"**

ಒಂದು ಸಂಸಾರದಲ್ಲಿ ಗಂಡ ಮತ್ತು ಮಕ್ಕಳನ್ನು ನಿಬಾಯಿಸುವವಳು ಹೆಂಡತಿ. ಗಂಡ ಮತ್ತು ಮಕ್ಕಳನ್ನು ಯಾವ ರೀತಿ ನೋಡಿಕೊಳ್ಳಬೇಕು ಎನ್ನುವುದನ್ನು ಈ ಗಾದೆ ಹೇಳುತ್ತದೆ. ಮಕ್ಕಳು ಸಿಹಿ ಕಂಡರೆ ಬಿಡುವುದಿಲ್ಲ. ಗಂಡನು ತನ್ನ ಹೆಂಡತಿ ಹತ್ತಿರ ಹಣವಿದೆ ಎಂದರೆ ಬಿಡುವುದಿಲ್ಲ. ಅವಳ ಜೀವವನ್ನು ಹಿಂಡಿ ಹಿಪ್ಪೆ ಮಾಡುತ್ತಾರೆ.

ಯಾರೇ ಆಗಲಿ ಅವರು ಇಷ್ಟಪಡುವ ವಸ್ತುವನ್ನು ತೋರಿಸಬಾರದು. ಅದನ್ನು ಪಡೆಯುವವರೆಗೂ ಬಿಡುವುದಿಲ್ಲ.

**೯೪. "ಇಲ್ಲ ಅಂತಹ ಕೊರಗಬಾರದು ಇದೆ ಅಂತಹ ಮೆರೆಯಬಾರದು"**

ಮನುಷ್ಯ ಜೀವನ ಸಮತೂಕದ ತಕ್ಕಡಿಯ ಹಾಗೆ ಇರಬೇಕು. ಬೇಕುಬೇಡಗಳ ಮಧ್ಯೆ ಮನುಷ್ಯ ಬದುಕಬೇಕಾಗುತ್ತದೆ. ಹಣ ಇದ್ದರೂ ಇಲ್ಲದಿದ್ದರೂ ಜೀವನ ಪಯಣವನ್ನು ಮುಂದುವರೆಸಬೇಕು. ನಮ್ಮ ಹತ್ತಿರ ಹಣವಿಲ್ಲವೆಂದು ಕೊರಗುತ್ತಾ ಕೂರಬಾರದು. ಇದರಿಂದ ಲಾಭವಿಲ್ಲ. ಪ್ರಯೋಜನಕ್ಕೆ ಬಾರದ ವಿಷಯದ ಬಗ್ಗೆ ತಲೆಕೆಡಿಸಿಕೊಳ್ಳಬಾರದು ಕಾರ್ಯಪ್ರವೃತ್ತವಾಗುವ ಕಡೆಗೆ ಮನಸ್ಸು ಕೇಂದ್ರಿತವಾಗಲಿ, ಅದೇ ರೀತಿ ಹಣವಿದೆ ಎಂದು ಗರ್ವ ಅಹಂ ಪಡಬಾರದು. ಹಣವೆಂಬುದು ಚಂಚಲಾ ಲಕ್ಷ್ಮೀ ಇವತ್ತು ಇರುತ್ತದೆ ನಾಳೆ ಹೋಗುತ್ತದೆ. ಅದರಲ್ಲಿಯೂ ಮಾನವೀಯತೆಯೇ ಮುಖ್ಯ.

**೯೫. "ಬೀದಿ ಲೋಗರ ಕೆಣ್ಕಾ ಅವರ್ ಬಂದು ತಣ್ಕಾ"**

ಮನುಷ್ಯನ ನಡತೆಯಲ್ಲಿ ಘನತೆ, ಗಾಂಭೀರ್ಯವಿರಬೇಕು. ಮನುಷ್ಯನು ಸುಮ್ಮನಿರಲು ಕೆಲವೊಂದು ಬಾರಿ ಆಗುವುದಿಲ್ಲ ಅದು ಕೆಲವೊಬ್ಬರ ಸ್ವಭಾವಗಳು. ಸುಮ್ಮನಿರಲು ಆಗದೇ ಬೀದಿಯಲ್ಲಿ ಹೋಗುವ ಜನರನ್ನು ಕೆಣಕಿದರೆ ಸುಮ್ಮನೆ ಬಿಡುತ್ತಾರೆಯೇ ಅವರು ಬಂದು ಹೊಡೆಯುತ್ತಾರೆ ಎಂಬುವುದು ಎಚ್ಚರದ ನುಡಿಯಾಗಿ ಬಳಸುತ್ತಾರೆ. ಮನುಷ್ಯ ಸುಮ್ಮನಿರದೆ ಕಾಲು ಕೆರೆದುಕೊಂಡು ಜಗಳಕ್ಕೆ ಕೆದಕಿದರೆ ಅವನಿಗೆ ಲಾತು ತಪ್ಪಿದ್ದಲ್ಲ. ಅಗತ್ಯವಿಲ್ಲದ ಮಾತು ಜಗಳ ಒಳ್ಳೆಯದಲ್ಲ. ಸೌಮ್ಯ ಗುಣ ಮನುಷ್ಯನಿಗೆ ಭೂಷಣ ಎಲ್ಲರನ್ನು ಮಾತನಾಡಿಸಿಕೊಂಡ ಜಗಳಕ್ಕೆ ಹೋಗಬಾರದು. ಹಾಗೆ ಮಾಡಿದರೆ ಅವರು ಬಂದು ನಮ್ಮನ್ನು ಹೊಡೆಯುತ್ತಾರೆ. ಯಾರನ್ನು ಕೆಣಕದೆ ತೆಪ್ಪಗಿರುವುದು ಲೇಸು ಎಂಬುದು ಈ ಗಾದೆಯ ಸೂಚ್ಯ ಸಂದರ್ಭ.

**೯೬. "ಸಾವಿಗೆ ಒತ್ತಿಕೊಂಡು ಕಂಡ್ರಮನೆ ಕಾಯಲ್‌ಗೆ ಕಾಯುತ್ತ ಕುತ್ತಿದ್ದಳಂತೆ"**

ಸಾವಿಗೆ ಕಾಯಲ್ ಹಳ್ಳಿಯಲ್ಲಿ ಬಹಳ ಇಷ್ಟವಾದ ಸಿಹಿತಿನಿಸು. ಅಂತಹದರಲ್ಲಿ ಒಬ್ಬಳಿಗೆ ಸಾವಿಗೆ ತಿನ್ನುವ ಆಸೆಯಾಗಿರುತ್ತದೆ. ಸಾವಿಗೆ ಮಾಡುತ್ತಾಳೆ. ಆದರೆ ನೆರೆಮನೆಯಿಂದ ಬರುವ ಬೆಲ್ಲದ ಕಾಯಲ್ ಕಾಯುತ್ತಿದ್ದಳು. ಇಲ್ಲಿ ಒಂದು ತನಗೆ ಕಾಯಲ್ ಮಾಡಲು ಬರುವುದಿಲ್ಲವೆಂದು ವ್ಯಕ್ತವಾಗುತ್ತದೆ. ಮತ್ತೊಂದು ತನ್ನ ಮನೆಯಲ್ಲಿ ಮಾಡಿದ್ದಕ್ಕಿಂತ ನೆರೆಮನೆಯದ್ದು ಚೆನ್ನಾಗಿದೆ ಎಂದು ಬಯಸುವುದು.

**೯೭. "ಪಕ್ಕದ ತಟ್ಟೆಯಲ್ಲಿ ನೊಣ ಬಿದ್ದುದು ನೋಡಿ ನಗುತ್ತಿದ್ದನಂತೆ ಅವನ ತಟ್ಟೆಯಲಿ ಹೆಗ್ಗಣಾಣೆ ಸತ್ತಿತಂತೆ"**

ಇನ್ನೊಬ್ಬರ ಕಷ್ಟವನ್ನು, ಸ್ಥಿತಿಯನ್ನು ನೋಡಿ ನಗಾಡುವುದು ಸರಿಯಲ್ಲ. ತನಗೆ ಆ ಸ್ಥಿತಿ ಒದಗಿದಾಗ ಅದು ಇನ್ನೊಬ್ಬರಿಗಿಂತ ಘನಘೋರವಾಗಿರುತ್ತದೆ. ಬೇರೆಯವರನ್ನು ನೋಡಿ ಆಡಿಕೊಳ್ಳುವ ಸಮಯದಲ್ಲಿ ಬಳಸುತ್ತಾರೆ. ಬೇರೆಯವರಿಗೆ ಕಷ್ಟಬಂದಿದೆ ಎಂದರೆ ಅದಕ್ಕೆ ಮರುಗಬೇಕು ಸಹಾಯ ಮಾಡಬೇಕು. ಈ ಗಾದೆಯು ಕೊಡುವ ಸಾದೃಶ್ಯ ಬಹಳ ಮನೋಜ್ಞವಾಗಿದೆ. ಪಕ್ಕದ ತಟ್ಟೆಯಲ್ಲಿ ಬಿದ್ದಿರುವ ನೊಣ ನೋಡಿ ನಕ್ಕರೆ ತನ್ನ ತಟ್ಟೆಯಲ್ಲಿ ಬಿದ್ದಿರುವ ಹೆಗ್ಗಣ ಅದಕ್ಕಿಂತಲೂ ಬೀಕರ ಮತ್ತು ಅಸಹ್ಯವಾದುದ್ದು.



**೯೮. "ತಾನು ಹೆಂಗಸಾಗಿ ರಾಗಿ ರೊಟ್ಟಿ ಒಗೆಸಿದ್ದಳಂತೆ"**

ಹೆಂಗಸಾಗಿ ಹುಟ್ಟಿದ ಮೇಲೆ ಅಡುಗೆ ಮಾಡಬೇಕು. ಬರದಿದ್ದ ಸಂದರ್ಭದಲ್ಲಿ ಬಳಸುತ್ತಾರೆ. ಹೆಂಗಸಾಗಿ ಹುಟ್ಟಿದ ಮೇಲೆ ರೊಟ್ಟಿ ಹಾಕಲು ಬರಬೇಕು. ಆದರೆ ರೊಟ್ಟಿ ಮಾಡಲು ಬರದಿದ್ದಾಗ ತಿನ್ನುವ ಆಸೆಯಾಗಿ ಬಯಸಿದ್ದಳಂತೆ. ಬೇರೆಯವರು ಮಾಡಿಕೊಡುವುದಿಲ್ಲ. ಸದ್ಗೃಹಿಣಿ ತಾನೇ ಮಾಡಿಕೊಂಡು ತಿನ್ನಬೇಕು. ಸದ್‌ಗೃಹಿಣಿಯ ಲಕ್ಷಣ ಅಡುಗೆ ಮಾಡುವುದು. ಅಂತಹ ಹೆಣ್ಣು ಸಂಸಾರವನ್ನು ಸಮರ್ಥವಾಗಿ ನಡೆಸಲು ಸಾಧ್ಯ.

**೯೯. "ಹೊಳೆಯಲ್ಲಿ ನಿಂತುಕೊಂಡು ಬಾಯಾರಿಕೆ ಅಂದ್ರಂತೆ"**

ಸೋಮಾರಿತನ ಎನ್ನುವುದು ಮನುಷ್ಯನಲ್ಲಿ ಎಷ್ಟರಮಟ್ಟಿಗೆ ಬೇರೂರಿದೆ ಎಂಬುದನ್ನು ತಿಳಿಸಿದೆ. ಅತ್ತಲ ಕಟ್ಟಿ ಇತ್ತಲಾಗೆ ಹಾಕಲಾರದಷ್ಟು ಸೋಮಾರಿತನ. ಸೋಮಾರಿತನ ಪ್ರದರ್ಶಿಸುವ ಸಮಯದಲ್ಲಿ ಬಳಸುತ್ತಾರೆ. ಯಾರಾದರೂ ಹೊಳೆಯಲ್ಲಿ ನಿಂತುಕೊಂಡು ಬಾಯಾರಿಕೆ ಅನ್ನುತ್ತಾರೆಯೇ ಸೊಂಟ ಬಗಿಸಿ ಬೊಗಸೆಯಲ್ಲಿ ನೀರು ಕುಡಿದರೆ ಆಗುತ್ತದೆ. ಹಾಗೆ ಮಾಡದಿರುವುದು ಸೋಮಾರಿತನ. ಅದರಂತೆ ಹತ್ತಿರ ಇರುವ ಸಂಪತ್ತು ಬಿಟ್ಟು, ಹತ್ತಿರ ಇರುವ ಅವಕಾಶ ಬಿಟ್ಟು ಇಲ್ಲದ್ದನ್ನು ಬಯಸುವುದು.

**೧೦೦. "ಆಡವೆರಡು ಆಡು ಹೋದ ಹಾಗೆ ನೋಡವೆರಡು ಕಣ್ಣು ಹೋದ ಹಾಗೆ"**

ಮನುಷ್ಯ ಸತ್ತಾಗ ಅವನು ದ್ದಾಗ ಹೇಗೆ ಇದ್ದ ಎನ್ನುವ ಸಂದರ್ಭದಲ್ಲಿ ಬಳಸುತ್ತಾರೆ. ಆಡು ಆಡುವುದು ನೋಡುನೋಡುತ್ತಿದ್ದಂತೆ ಕಣ್ಮರೆಯಾಗಿವೆ. ಅದೇ ರೀತಿ ನೋಡುತ್ತಿರುವ ಎರಡು ಕಣ್ಣು ಹೋಯಿತು ಎಂದರೆ ಬೆಲೆ ಬಾಳುವ ಜೀವ

ಹೋಯಿತು ಎನ್ನುವ ಅರ್ಥ ಸೂಕ್ಷ್ಮವಾಗಿ ಹೊಳೆಯುತ್ತದೆ. ಎದುರಿಗಿದ್ದ ಜೀವ ನೋಡು ನೋಡುತ್ತಿದ್ದಂತೆ ಕಣ್ಮರೆಯಾಯಿತು ಎಂಬುದು ಸ್ಪಷ್ಟ. ಇಲ್ಲಿ ಆಡು ಮತ್ತು ಕಣ್ಣು ಮನುಷ್ಯ ಕಣ್ಮರೆಯಾಗಲು ಕಾರಣವಿಲ್ಲ ಇದ್ದಂತೆ ಮಾಯವಾಗಿವೆ. ಜೀವ ಆಕಸ್ಮಿಕ ಎಂದು ಸಾರುತ್ತದೆ.

## ೧೦೧. "ಪಾಪಿ ಸಮುದ್ರಕ್ಕೆ ಹೋದ್ರು ಮೊಣಕಾಲುದ್ದನೇ ನೀರು"

ಪಾಪ ಪುಣ್ಯದ ಕಲ್ಪನೆ ನಮ್ಮ ಸನಾತನ ಧರ್ಮದ ಉದಾತ್ತ ತತ್ವಗಳಲ್ಲಿ ಒಂದು. ಮನುಷ್ಯನ ಸಾವು ಖಚಿತ, ಪ್ರತಿಯೊಬ್ಬ ಹುಟ್ಟಿದ ಮನುಷ್ಯನು ಸಾಯುತ್ತಾನೆ. ಇದು ಪ್ರಕೃತಿ ನಿಯಮ. ಅವನು ಬದುಕಿದ್ದಾಗ ಒಳ್ಳೆಯ ಕಾರ್ಯಗಳನ್ನು ಮಾಡಬೇಕು. ನೀತಿ, ಧರ್ಮ ಮಾರ್ಗದಲ್ಲಿ ಬದುಕಬೇಕು. ಪರೋಪಕಾರವನ್ನು ಮಾಡಬೇಕು. ಅವನ ಬದುಕಿನಲ್ಲಿ ಪುಣ್ಯದ ಕೆಲಸವನ್ನು ಮಾಡಿದ್ದರೆ ಸ್ವರ್ಗ ಸುಖವನ್ನು ಪಾಪ ಕಾರ್ಯಗಳನ್ನು ಮಾಡಿದರೆ ನರಕ ಯಾತನೆಯನ್ನು ಅನುಭವಿಸುತ್ತಾನೆ. ಇದು ಪೂರ್ವಾಗ್ರಹ ಕಲ್ಪನೆಯಿಂದ ಮನುಷ್ಯನ ನಡವಳಿಕೆಗಳನ್ನು ತಿದ್ದುವ ಒಂದು ವಿಧಿಬದ್ಧ ಕಾನೂನಾಗಿ ಬಳಕೆಯಾಗುತ್ತದೆ. ಪಾಪ–ಪುಣ್ಯ ಹಾಗೆಯೇ ಪಾಪ ಕಾರ್ಯಗಳನ್ನು ಮಾಡಿದ ಮನುಷ್ಯ ತಾನು ಅಂತಿಮವಾಗಿ ಐಕ್ಯವಾಗುವ ಸಂದರ್ಭ. ಜೀವನದ ಜಂಜಾಟದಲ್ಲಿ ಬೇಸತ್ತು ತನ್ನನ್ನು ತಾನು ಶಿಕ್ಷಿಸಿಕೊಳ್ಳುವ ಸಂದರ್ಭ, ಸಮುದ್ರಕ್ಕೆ ಬಿದ್ದು ಸಾಯಲು ಹೋದಾಗ ಅಲ್ಲಿಯೂ ನೀರಿನ ಮಟ್ಟ ಮಂಡಿಯಿಂದ ಕೆಳಕ್ಕೆ ನೀರಿನ ಮಟ್ಟ ಕುಸಿಯುತ್ತದೆ. ಸಮುದ್ರದ ನೀರು ಪಾಪಿಯ ಪಾದ ಸ್ಪರ್ಶದಿಂದ ಕಡಿಮೆಯಾಗುತ್ತದೆ. ಮನುಷ್ಯನ ಆಶೋತ್ತರಗಳು ಈಡೇರದ ಸ್ಥಿತಿ ಮನುಷ್ಯನ ಪ್ರಯತ್ನ ಫಲಕಾರಿಯಾಗದೆ ಅವಕಾಶದಿಂದ ವಂಚಿತವಾಗುವ ಕ್ರೂರ ಸ್ಥಿತಿ. ಏನೇ ಮಾಡಿದರೂ ಹಣೆ ಬರಹವೇ ಇಷ್ಟು ಎನ್ನುವ ಅಪನಂಬಿಕೆ. ಸಾಂಸಾರಿಕ ಜೀವನದಲ್ಲಿ ತುಂಬಾ ಸಂಕಷ್ಟಗಳಿಗೆ ಒಳಗಾಗಿ ಹಲವು ಮಾರ್ಗಗಳಲ್ಲಿ ಪ್ರಯತ್ನಿಸಿದರೂ ಯಶಸ್ಸು ಕಾಣದ ಸ್ಥಿತಿ.

## ೧೦೨. " ನೆನೆದವ್ರು ಮನದಲ್ಲಿ ಬಂದ್ರೆ ನೂರು ವರ್ಷ ಆಯಸ್ಸು"

ಮನಸ್ಸಿಗೆ ಹತ್ತಿರವಾದವರನ್ನು ಕಾಣುವ ನೋಡುವ ಹಂಬಲಿಕೆ ಮನಸ್ಸಿಗೆ ಭಾವನೆಗಳು ಫಲಕಾರಿಯಾದಾಗ ಆರೈಕೆಯ ನುಡಿಗಳು ವ್ಯಕ್ತವಾಗಿವೆ. ಮನಸ್ಸು ಅತೀವ ದುಃಖ ಮತ್ತು ಸುಖ ಎರಡನ್ನೂ ಅನುಭವಿಸುತ್ತದೆ. ಮನಸ್ಸು ನೋವಿಗಿಂತ ಸುಖ ಬಯಸುವುದು ಸಹಜ, ಆ ಸುಖ ವಸ್ತುವಿನಿಂದ ಆಗಬಹುದು. ವ್ಯಕ್ತಿಯಿಂದ ಆಗಬಹುದು, ಮನಸ್ಸು ಅಂತಹ ವ್ಯಕ್ತಿಗಳನ್ನು ವಸ್ತುಗಳನ್ನು ಸದಾ ನೆನಪಿಸುತ್ತದೆ. ಆ ಸಂದರ್ಭದಲ್ಲಿ ವ್ಯಕ್ತಿಗಳು ಪ್ರತ್ಯಕ್ಷವಾಗಿ ಕಣ್ಣೆದುರಿಗೆ ಬಂದಾಗ ಪುಳಕಿತಗೊಂಡ ಮನಸ್ಸು

ನೂರು ವರ್ಷಗಳ ಕಾಲ ಬದುಕಿ ಬಾಳಲೆಂದು ಆಶಿಸುತ್ತವೆ. ಮನುಷ್ಯ ತನಗೆ ಒಳ್ಳೆಯದು ಮಾಡಿದವರಿಗೆ ಪ್ರತ್ಯುಪಕಾರವಾಗಿ ಒಳ್ಳೆಯದನ್ನು ಬಯಸುತ್ತದೆ. ಮನುಷ್ಯನ ಮನಸ್ಸು ಇಷ್ಟ ಪಡುವವರು ಸದಾಕಾಲ ನೋಡುವ, ಹತ್ತಿರ ಇರಲೆಂದು ಬಯಸುತ್ತದೆ. ಅಂತಹವರು ಸದಾಕಾಲ ಮನಸ್ಸಿನಲ್ಲಿ ಹೃದಯದ ಹತ್ತಿರವಿರುತ್ತಾರೆ.

**೧೦೩ "ತಾಳಿದೋನು ಒಬ್ಬ ಬಾಳುತ್ತಾನೆ"**

ಜನಪದರು ಬದುಕಿನ ಸಿದ್ಧಾಂತವನ್ನು ಕಟ್ಟಿಕೊಡುವಲ್ಲಿ ನಿಪುಣರು. ತಾಳ್ಮೆ ಮನುಷ್ಯನಿಗೆ ಬಹಳ ಮುಖ್ಯ. ತಾಳ್ಮೆಯೊಂದಿದ್ದರೆ ಯಾವುದೇ ಕಾರ್ಯಗಳನ್ನು ಮಾಡಬಹುದು. ತಾಳ್ಮೆ ಇದ್ದರೆ ಯಶಸ್ಸು ಕಟ್ಟಿಟ್ಟಬುತ್ತಿ ಎಂಬುದನ್ನು ಈ ಗಾದೆ ಮಾತು ಕಟ್ಟಿಕೊಡುತ್ತದೆ. ಜೀವನದಲ್ಲಿ ಕಷ್ಟ ಸುಖಗಳನ್ನು ನಿಬಾಯಿಸಲು ತಾಳ್ಮೆ ಬಹಳ ಮುಖ್ಯ. ಇವತ್ತು ಮನುಷ್ಯನಿಗೆ ಸಂಕಷ್ಟಗಳು ಎದುರಾಗಿರಬಹುದು. ಆದರೆ ಮುಂದೆ ಒಂದು ದಿನ ಆ ಸಂಕಷ್ಟಗಳು ಪರಿಹಾರವಾಗುತ್ತವೆ ಎಲ್ಲವನ್ನು ಸಮಚಿತ್ತ ಭಾವದಿಂದ ಸ್ವೀಕರಿಸಿ ಸಮಸ್ಯೆಯನ್ನು ಪರಿಹರಿಸುವ ವ್ಯವದಾನದ ಅವಶ್ಯಕತೆ ಇದೆ. ಜೀವನ ನಿರ್ವಹಣೆ ಮಾನಸಿಕ ಪಕ್ವತೆ ಬಹಳ ಮುಖ್ಯ. ತಾಳ್ಮೆಯ ಮನುಷ್ಯ ಎಂತಹ ಎಡರು ತೊಡರುಗಳಿದ್ದರೂ ನಿಬಾಯಿಸುವ ಎದೆಗಾರಿಕೆ ಇರುತ್ತದೆ ಎಂದು ಜನಪದರ ಜೀವನದ ಮೂಲ ಮಂತ್ರವಾಗಿದೆ. ಇಂದಿನ ದಿನಗಳಲ್ಲಿ ಮನುಷ್ಯ ತಾಳ್ಮೆಗಿಂತ ಆತುರ ಬುದ್ಧಿಯೇ ಹೆಚ್ಚಾಗಿದೆ. ತಾಳ್ಮೆಗೆಟ್ಟು ತಪ್ಪು ನಿರ್ಧಾರಗಳನ್ನು ತೆಗೆದುಕೊಂಡು ಸಾಂಸಾರಿಕ ಜೀವನ ಹಲ್ಲೋಲ ಕಲ್ಲೋಲವಾಗಿರುವುದನ್ನು ಕಾಣಬಹುದು. ತಾಳ್ಮೆ ಬರುವುದು ಜೀವನದ ಅನುಭವದಿಂದ ಅದನ್ನು ಪಡೆಯಲು ಸದಾ ಸಿದ್ಧರಾಗಿರಬೇಕು.

**೧೦೪. "ಬಡಿವಾರಕ್ಕೆ ಬಳಿದು ಹಿಕ್ಕಿದ್ಲಂತೆ ಹಿತ್ತಲಿಗೆ ಹೋಗಿದ್ಲಂತೆ ಕೈ ನೆಕ್ಕದಿಕ್ಕೆ".**

ಜನ ತನ್ನ ಹತ್ತಿರ ಐಶ್ವರ್ಯ ಇಲ್ಲದಿದ್ದರೂ ಇದೆ ಎಂದು ಬಡಾಯಿಕೊಚ್ಚಿಕೊಂಡು ಬಡಿವಾರ ತೋರಿಸುತ್ತಾರೆ. ಬಂದಂತಹ ಅತಿಥಿಗಳಿಗೆ ವಿಶ್ವಾಸಕ್ಕೆ ಇರುವುದೆಲ್ಲವನ್ನು ಊಟಕ್ಕೆ ಬಡಿಸಿದಳು. ಬಂದಂತಹ ಅತಿಥಿಗಳಿಗೆ ಇಲ್ಲ ಎಂದು ಹೇಳುವಂತಿಲ್ಲ, ತನಗೂ ಉಳಿಸಿಕೊಳ್ಳದೆ ಎಲ್ಲವನ್ನು ಅತಿಥಿಗಳಿಗೆ ಉಣಬಡಿಸಿ ತಾನು ಮನೆಯ ಹಿತ್ತಲಿಗೆ ಹೋಗಿ ಕೈಯನ್ನು ನೆಕ್ಕಿಕೊಳ್ಳುತ್ತಾನೆ. ಸತ್ಕಾರದ ಮಂಪರಿನಲ್ಲಿ ತನಗೂ ಮಿಗಿಸಿಕೊಳ್ಳುವ ಪರಿಜ್ಞಾನವೇ ಇಲ್ಲ. ಈ ಎಲ್ಲ ಕಾರ್ಯಗಳನ್ನು ಮಾಡುವ ಮನೆಯ ಒಡತಿ ಉಪಚರಿಸಿದರೂ ತನ್ನ ಬಗ್ಗೆಯೂ ಯೋಚಿಸಬೇಕು. ಮನುಷ್ಯ ಸ್ವಭಾವತಃ ತಾನು ಯಾರಿಗಿಂತಲೂ ಕೀಳಲ್ಲ ಮೇಲು ಎಂದು ತೋರಿಕೆಯ ಜೀವನವನ್ನು ನಡೆಸುವುದು ಸರಿಯಲ್ಲ ತೋರಿಕೆಯ ಒಣಜಂಭ ಸರಿಯಲ್ಲ.

## ೧೦೫. "ಸುಂದ್ರು ಬಾಳೆಹೆಣ್ಣು ತಂದೌನ್ ಬಾಯಿಗೆ ಮಣ್ಣು"

ಗಂಡು ತನ್ನ ಬಾಳ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವಾಗ ತನ್ನ ಮನದನ್ನೆ ಸ್ಪುರದ್ರೂಪಿಯಾಗಿರಬೇಕೆಂದು ಬಯಸುವುದು ಗಂಡಿನ ಮನೋಧರ್ಮ. ಆದರೆ ಸಂಸಾರ ರಥ ನಡೆಸಲು ಸೌಂದರ್ಯಕ್ಕಿಂತ ಮುಖ್ಯ ಗುಣ. ಆದರೆ ಗಂಡು ಸೌಂದರ್ಯಕ್ಕೆ ಮಾರುಹೋಗಿ ಸೌಂದರ್ಯವತಿಯನ್ನು ಮದುವೆಯಾಗುತ್ತದೆ. ಸೌಂದರ್ಯ ನೋಡಲು ಆರಾಧಿಸಲು, ಪ್ರದರ್ಶಿಸಲು ಮಾತ್ರ ಯೋಗ್ಯ ಆದರೆ ಸೌಂದರ್ಯಕ್ಕೆ ತಕ್ಕಂತೆ ಮನುಷ್ಯನಿಗೆ ಶಕ್ತಿ ಸಾಮರ್ಥ್ಯ ಅಗತ್ಯ. ಸುಂದರವಾದ ಹೆಣ್ಣು ಮದುವೆ ಗಂಡಿನ ಸ್ಥಿತಿ ತಿಳಿಸುತ್ತದೆ. ಅಂತಹ ಗಂಡಿನ ಸ್ಥಿತಿ ಅಧೋಗತಿಗೆ ಇಳಿಯುತ್ತದೆ. ಹೆಣ್ಣು ಸೌಂದರ್ಯ ಕೆಲಸ ಕಾರ್ಯಗಳ ಪ್ರವೀಣೆಯಾಗಿರಬೇಕು. ಹೆಣ್ಣು ಗಂಡಿನ ಸಕಲ ಸೌಕರ್ಯಗಳನ್ನು ನಿಬಾಯಿಸಬೇಕು. ಬರೀ ಸೌಂದರ್ಯವತಿಯಾಗಿ ಸಂಸಾರ ನಿರ್ವಹಣೆ ಮಾಡದಿದ್ದ ಹೆಣ್ಣು ಕಟ್ಟಿಕೊಂಡ ಗಂಡ ಬಾಯಿಗೆ ಆಹಾರ ಬದಲು ಮಣ್ಣೇ ಗತಿ ಎಂದು.

## ೧೦೬. "ಈಗ ಬಂದವಳಿಗೆ ಯಾಕೆ ಕುಟುಂಬ ದ್ವಾಸೆ"

ಸಹ ಕುಟುಂಬ ಪದ್ಧತಿ ಭಾರತದ ಸಂಸ್ಕೃತಿಯ ಪ್ರತೀಕ ದೊಡ್ಡಪ್ಪ. ಚಿಕ್ಕಪ್ಪ, ಅಪ್ಪ, ಅತ್ತೆ, ಅತ್ತಿಗೆ, ನಾದಿನಿ ಎಲ್ಲರೂ ಕೂಡಿ ಬಾಳಿದರೆ ಸಂಸಾರ ಸಾರ್ಥಕ್ಯ. ಈ ಗಾದೆಯು ಹಿರಿತನ ಕಿರಿತನಗಳ ನಡುವೆ ತಾರತಮ್ಯವಿದೆ. ಮೊದಲಿಗೆ ಹೆಚ್ಚಿನ ಆದ್ಯತೆ ಕೊಡಬೇಕು. ಆಸ್ತಿಯ ವಿಚಾರವೇ ಆಗಲಿ, ವಸ್ತುವಿನ ವಿಚಾರವೇ ಆಗಲಿ ಹಿರಿಯವರಿಗೆ ಹೆಚ್ಚಿನ ಪಾಲು ಕಿರಿಯವರಿಗೆ ಕಡಿಮೆಪಾಲು ಎಂಬುವುದು ರೂಢಿ. ಈಗ ಬಂದಿರುವ ಸೊಸೆಯಾಗಲಿ, ಈಗ ಊರಿಗೆ ಬಂದವರಿಗಾಗಲಿ ಅವರಿಗೆ ಅಧಿಕವಾಗಿ ಏನನ್ನು ಕೊಡಬಾರದು. ಇಲ್ಲಿ ದೋಸೆ ಹೊಸಬರಿಗೆ ಕೊಡುವ ಸೌಕರ್ಯಗಳ ಸಂಕೇತವಾಗಿದೆ. ಹಂಚಿಕೆಯ ವಿಧಾನದಲ್ಲಿ ಮೊದಲು ಕೊನೆಯವರಿಗೆ ಕೊಡುವಾಗ ವ್ಯತ್ಯಾಸವಿರಬೇಕು ಎಂದು ತಿಳಿಸುತ್ತದೆ.

## ೧೦೭. "ಹಂಗಿನ ಅರಮನೆಗಿಂತ ಗುಡಿಸಲು ಗಂಜಿನೇ ಲೇಸು"

ಬೇರೆಯವರ ಆಶ್ರಯದಲ್ಲಿ ಇರುವುದಕ್ಕಿಂತ ತನ್ನ ಸ್ವಂತ ಶಕ್ತಿಯಿಂದ ಬದುಕಬೇಕು ಎಂಬ ಸ್ವಾಭಿಮಾನವನ್ನು ತುಂಬಿಕೊಡುತ್ತದೆ. ಮನುಷ್ಯ ತನ್ನ ಸ್ವಂತ ದುಡಿಮೆಯಲ್ಲಿ ಬುದಕಬೇಕು ಎಂಬುದನ್ನು ತಿಳಿಸುತ್ತದೆ. ಸ್ವಸಾಮರ್ಥ್ಯದಿಂದ ತೆಂಗಿನ ಗರಿಯ ಗುಡಿಸಲಿನಲ್ಲಿ ಇರುವುದು ಒಳಿತು. ಯಾವುದೇ ಶ್ರಮಪಡೆದೆ ಅದ್ದೂರಿ ಜೀವನ್ನು ಬಯಸುವವರು ಬೇರಯವರ ಅರಮನೆಯಲ್ಲಿರಬೇಕು. ಅವರ ಕಾಲೋತ್ತಿನ ಧೂಳಾಗಿರಬೇಕು. ಮೃಷ್ಟಾನ್ನ ಭೋಜನಕ್ಕಿಂತ ಗಂಜಿಯೇ ಯೋಗ್ಯ. ಬೇರೆಯವರ

ಆಶ್ರಯದ ಸುಖದ ಸುಪ್ಪತ್ತಿಗೆಗಿಂತ ತನ್ನದು ಎನ್ನುವ ಅರೆಬರೆಯ ಸುಖವೇ ಲೇಸು. ಸ್ವಾಭಿಮಾನಿಯಾಗಿರುವಂತೆ ಹೇಳುವ ಈ ಗಾದೆ ಇಂದಿನ ದಿನಗಳಲ್ಲಿ ಕೆಲವರಲ್ಲಿ ಬಹಳ ಕ್ರಾಂತಿಕಾರಿಯಾಗಿ ಬಳಕೆಯಾದರೆ ಕೆಲವರಲ್ಲಿ ಅಡಿಯಾಳಾಗುವ ಪ್ರವೃತ್ತಿ ಇದೆ.

**೧೦೮. "ಹೊಟ್ಟೆಗೆ ಇಲ್ಲದವನೆ ಬಡವ ಕೈಗಿಲ್ಲದವನೆ ಕಳ್ಳ"**

ಮೂಲಭೂತ ಅವಶ್ಯಕತೆಗಳು ವಸತಿ, ಆಹಾರ, ಬಟ್ಟೆ ಇವು ಮನುಷ್ಯನ ಜೀವನಕ್ಕೆ ಅಗತ್ಯ. ಈ ಮೂಲಭೂತ ಆವಶ್ಯಕತೆಗಳನ್ನು ಯಥೇಚ್ಚವಾಗಿ ಹೊಂದಿರುವವನೆ ಶ್ರೀಮಂತ. ಮೂಲಭೂತ ಅವಶ್ಯತೆಗಳನ್ನು ಹೊಂದಿಲ್ಲದವನೇ ಬಡವ ಅಂದರೆಮೂಲಧನವನ್ನು ಇಲ್ಲದವನು ಚೋರ. ವ್ಯಕ್ತಿಯೊಬ್ಬ ಬದುಕುವುದು ಹೊಟ್ಟೆಗಾಗಿ, ಗೇಣುದ್ದ ಬಟ್ಟೆಗಾಗಿ ಈ ಆವಶ್ಯಕತೆಗಳಿಗಾಗಿ ಮನುಷ್ಯ ಶ್ರಮಪಟ್ಟು ದುಡಿಯುತ್ತಾನೆ. ಹಸಿವು ಏನು ಬೇಕಾದರೂ ಮಾಡಿಸುತ್ತದೆ. ಕೈಯಲ್ಲಿ ಕಾಸು ಇಲ್ಲವೆಂದರೆ ಬೇರೆಯವರ ಆಸ್ತಿ, ಹಣಕಾಸನ್ನು ಕದಿಯುತ್ತಾನೆ. ಹಣವಿದ್ದರೆ ಹಣವಂತ, ಗುಣವಿದ್ದರೆ ಗುಣವಂತ, ಹಣವಿಲ್ಲದವನು ಬಡವ ಎಂತಲೂ ಕರೆಯುತ್ತಾರೆ. ಕೈಯಲ್ಲಿ ಹಣಕಾಸು ಗಳಿಸಲು ವಂಚನೆಯ ಮಾರ್ಗದಲ್ಲಿ ಕಳ್ಳತನ ಮಾಡುತ್ತಾನೆ. ಯಾರಿಗೆ ಯಾವುದು ಇಲ್ಲವೋ ಅದನ್ನು ಪಡೆಯಲು ಮುಂದಾಗುತ್ತಾರೆ.

**೧೦೯. "ಕದ್ದು ಮದುವೆ ಆಗುತ್ತಿದ್ದೀನಿ ತಗ್ಗಿಬಡಿದೋಣು"**

ಮದುವೆ ಸಾಮೂಹಿಕ ಕ್ರಿಯಾವಿಧಿ, ಎಲ್ಲರೂ ಒಪ್ಪುವ ರೀತಿ ಮದುವೆಯಾಗುವುದು ಸಮಾಜದ ಕಟ್ಟುಪಾಡು. ಇಲ್ಲಿ ಮದುವೆಯಾಗುತ್ತಿರುವುದು ಗುಪ್ತವಾಗಿದೆ. ಮದುವೆಯಾಗಿ ಊರಿಗೆ ಬಂದಿದ್ದಾರೆ. ಯಾರಿಗೂ ಗೊತ್ತಿಲ್ಲದಂತೆ ಮದುವೆಯಾಗಿದೆ. ಮಂಗಳ ವಾದ್ಯಗಳನ್ನು ಬಡಿಯುವಾಗ ಶಬ್ದ ಬೇರೆಯವರಿಗೆ ಕೇಳಿಸಿಕೊಳ್ಳುತ್ತಾರೆ. ತಗ್ಗಿಸಿದೋಣುಗಳನ್ನು ಬಡಿ ಆಗ ಯಾರಿಗೂ ಶಬ್ದ ಕೇಳಿಸುವುದಿಲ್ಲ ಯಾರಿಗೂ ಗೊತ್ತಾಗುವುದಿಲ್ಲವೆಂದು ಅವನ ಅನಿಸಿಕೆ. ಆದರೆ ಮದುವೆಯಾಗಿರುವುದೇ ಉಂಟಂತೆ ಯಾರಿಗೂ ಗೊತ್ತಾಗದಂತೆ ಇರುವುದು ಸಾಧ್ಯವೆ. ತಪ್ಪು ನಡೆದಿದೆ ಅದನ್ನು ಮುಚ್ಚುವುದಕ್ಕೆ ಅಸಾಧ್ಯದ ಕೆಲಸ. ತಾನು ಮಾಡಿರುವ ತಪ್ಪನ್ನು ಬೇರೆಯವರಿಗೆ ತೋರಿಸಬಾರದು ಬಚ್ಚಿಡುವ ಪ್ರಕ್ರಿಯೆ. ನೀರಿನಲ್ಲಿ ಮುಳುಗಿದ ಮೇಲೆ ಚಳಿ ಎನ್ನಲಾಗುವುದಿಲ್ಲ. ಮನಸ್ಸು ಒಂದನ್ನು ಒಪ್ಪಿಕೊಂಡಮೇಲೆ ಏನೇ ಸಮಸ್ಯೆ ಬಂದರೂ ನಿಬಾಯಿಸಬೇಕು. ತಪ್ಪು ಮಾಡುವ ಮುಂಚೆ ಆ ತಪ್ಪನ್ನು ಒಪ್ಪಿಕೊಳ್ಳುವ ಎದೆಗಾರಿಕೆ ಮುಖ್ಯ. ನಾವು ಸಮಾಜಕ್ಕೋಸ್ಕರ ಬದುಕಿದ್ದಾಗ ತಪ್ಪನ್ನು ಮಾಡಬಾರದು.

## ೧೧೦. " ಮಾರಿ ಕಳಿಸಿ ಲಕ್ಷ್ಮೀ ಕರೆದುಕೊಂಡು ಬಾ"

ಹೆಣ್ಣು ಒಂದು ಕಡೆ ಪೂಜ್ಯನೀಯವಾದರೆ ಒಂದು ಕಡೆ ಹೆಣ್ಣು ತಿರಸ್ಕಾರಕ್ಕೆ, ಅಸಡ್ಡೆಗೆ, ಅಪನಿಂದನೆಗೆ, ನಿಕೃಷ್ಟಕ್ಕೆ ಬಲಿಯಾಗುವುದನ್ನು ಕಾಣಬಹುದು. ಹೆಣ್ಣು ಎಂದರೆ ಸಾಮಾನ್ಯವಾಗಿ ತಿರಸ್ಕಾರಭಾವವೇ ಹೆಚ್ಚು, ಹೆಣ್ಣು ಪೂಜ್ಯನೀಯವಾಗುವುದು ಅವಳು ದಾಂಪತ್ಯವನ್ನು ಸ್ವೀಕರಿಸಿದಾಗ. ''ಯತ್ರನಾರ್ಯಸ್ತು ಪೂಜ್ಯಂತೇ ರಮ್ಯಂತೆ ತತ್ರ ದೇವತಾಃ" ಎಂಬ ಮನುವಿನ ಹೇಳಿಕೆ ಹೆಣ್ಣಿನ ಪೂಜ್ಯತೆಗೆ ದ್ಯೋತಕವಾದರೆ, ಇದೇ ಮನು ಸ್ತ್ರೀಗೆ ಆಸ್ತಿಯ ಹಕ್ಕು ರಾಜಕೀಯ ಅವಕಾಶಗಳನ್ನು ಕೊಡಲು ಅನರ್ಹಳೆಂದು ಹೇಳಿದ ಮಾತುಗಳು ಗಮನಾರ್ಹ. ಮನುಸ್ಮೃತಿಯಲ್ಲಿ ತಿರಸ್ಕಾರದಿಂದ ಅವಕಾಶ ವಂಚಿತಳಾದ ಹೆಣ್ಣು ಮತ್ತೆ ಗೌರವ ಪೂಜ್ಯತೆಗೆ ಕಾರಣಳಾದಳು. ಬಹು ಅನಾದಿಕಾಲದಿಂದಲೂ ಹೆಣ್ಣು ಎಂದರೆ ಒಂದು ರೀತಿಯ ಅಸಡ್ಡೆ ತಿರಸ್ಕಾರಗಳಿಗೆ ಗುರಿಯಾಗಿದ್ದಾರೆ. ಅದೇ ಹೆಣ್ಣು ತಾಯ್ನಾಡಿಗೆ, ಭೂತಾಯಿಗೆ ಹೋಲಿಸಿ ಪೂಜಿಸುವುದನ್ನು ಕಾಣಬಹುದು. ಮನೆಯಲ್ಲಿ ಹುಟ್ಟಿದ ಹೆಣ್ಣು ಮಗಳು ಮಾರಿ ಅದೇ ಬೇರೆಯ ಮನೆಯಿಂದ ಸೊಸೆಯಾಗಿ ತರುವ ಹೆಣ್ಣು ಲಕ್ಷ್ಮೀ. ಸಮಾನವಾಗಿ ಹೋಲಿಸಿದ್ದಾರೆ. ಮನೆಯ ಮಗಳನ್ನು ಕಳುಹಿಸಿ ಇನ್ನೊಂದು ಹೆಣ್ಣನ್ನು ತರುವ ಪ್ರತೀತಿ. ಹೆಣ್ಣು ಬೇರೆಯವರ ಮನೆಯ ಸ್ವತ್ತು ಎಂಬ ಭಾವನೆ ಒಂದು ಕಡೆಯದ್ದ, ಇನ್ನೊಂದು ಕಡೆ ಬೇರೆಯವರ ಮನೆಯ ಹೆಣ್ಣನ್ನು ಗೌರವಾದಾರಗಳಿಂದ ಪೂಜಿಸುವುದು.

## ೧೧೧. " ಊರಿಗಿಲ್ಲದ ಉಸಾಬರಿ ನಿನಗೆ ಯಾಕೆ"

ಮನೆಯ ಜವಾಬ್ದಾರಿ, ಸಂಸಾರದ ಜವಾಬ್ದಾರಿ, ಊರಿನ ಜವಾಬ್ದಾರಿ, ದೇಶದ ಜವಾಬ್ದಾರಿಗಳ ಹೊಣೆಯನ್ನು ಹೊರುವುದು ಅಸಾಮಾನ್ಯ ಕೆಲಸ. ಮನುಷ್ಯನಲ್ಲಿ ಅಸಮಾನ್ಯ ಎದೆಗಾರಿಕೆ ಮುಖ್ಯ. ಯಾವುದೋ ಸಮಸ್ಯೆ ತಲೆದೋರಿದಾಗ ಆ ಜವಾಬ್ದಾರಿಯನ್ನು ನಿಬಾಯಿಸಲು ವ್ಯಕ್ತಿ ಒರ್ವ ಮುಂದಾಗ ಸಮಸ್ಯೆ ಇದ್ದವರು ಹೀಯ್ಯಾಳಿಸಿ ಅಪಮಾನ ಮಾಡಿದಾಗ, ಯಾರು ಪ್ರಶ್ನಿಸಿದಾಗ ಊರಿಗಿಲ್ಲದ ಅಂದರೆ ಊರಿನ ಪ್ರಮುಖರಿಗೆ ಇಲ್ಲದ ಹೊಣೆಗಾರಿಕೆ ನಿನಗೆ ಬೇಡ. ಒಬ್ಬನ ನ್ಯಾಯ ತೀರ್ಮಾನ ಒಳ್ಳೆಯದಲ್ಲ. ಎಲ್ಲರ ತೀರ್ಮಾನ ಮುಖ್ಯ. ಬೇರೆಯವರೆಲ್ಲ ಮೂಖಪ್ರೇಕ್ಷಕರಾಗಿರುವಾಗ ನಿನಗೆ ಆ ವಿಷಯ ಅನ್ವಯಿಸುವುದಿಲ್ಲ. ಒಮ್ಮತದಲ್ಲಿ ಬಲವಿದೆ. ಹೊಣೆಗಾರಿಕೆ ಎನ್ನುವುದು ಒಗ್ಗೂಡುವಿಕೆಯಲ್ಲಿದೆ ಯಾರೋ ಒಬ್ಬನದಲ್ಲ ಎಲ್ಲರ ಹೊಣೆ ಯಾವುದೇ ಕೆಲಸದಲ್ಲಿಯೂ ಎಲ್ಲರೂ ಸಹಭಾಗಿಗಳು.

## ೧೧೨. " ಊರು ಇದ್ದುತ್ತಾವಾ ಹೊಲಗೇರಿ"

ಜಾತಿಯ ವಾಣಿ ಶ್ರೇಣಿಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅಂತ್ಯಜ ಎನ್ನುವ ವ್ಯವಸ್ಥೆ ಇದೆ. ದಲಿತ, ಅಂತ್ಯಜ, ಅಶ್ಪೃಶ್ಯ, ಪಂಚಮ ಎಂಬ ನಾನಾ ನಮಾಂಕಿತಗಳಿಂದ ಕರೆಯಲ್ಪಡುವ ಸಮಾಜದ ನಿಕೃಷ್ಟ ಜಾತಿ ಹೊಲಯ ಜಾತಿ. ವೃತ್ತಿಗನುಸಾರವಾಗಿ ಜಾತಿಯ ರಚನೆಯಾಗಿದ್ದು, ಅಂತಿಮವಾಗಿ ವೃತ್ತಿಗನುಸಾರ ಜಾತಿಗಳು ಶಾಶ್ವತತೆಯನ್ನು ಪಡೆದುಕೊಂಡವು. ಸಮಾಜದಲ್ಲಿ ಬ್ರಾಹ್ಮಣರು ಪೌರೋಹಿತ್ಯವನ್ನು ಮಾಡಿದರೆ, ಕ್ಷತ್ರಿಯರು ರಾಜ್ಯಭಾರ ಹೊರುವ, ರಾಜ್ಯ ರಕ್ಷಣೆಯ ಕೆಲಸವನ್ನು ವೈಶ್ಯರು ವ್ಯಾಪಾರ ವಹಿವಾಟಿನ ಕೆಲಸವನ್ನು, ಶೂದ್ರರು ಶ್ರಮಪಟ್ಟು ದುಡಿಯುವ, ಅಂತ್ಯರು ಹೊಲಸನ್ನು ಹೊರುವ ಕಾರ್ಯಗಳನ್ನು ನಿಭಾಯಿಸುತ್ತಿದ್ದರು. ಹೊಲಸು ವೃತ್ತಿಯನ್ನು ನಿಭಾಯಿಸುತ್ತಿದ್ದ ಜನರನ್ನು ಊರಿನಿಂದ ಹೊರಗೆ ಇರಿಸಲಾಗುತ್ತಿತ್ತು. ಒಂದು ಊರು ಎಂದರೆ ಹೊಲಸು ತೆಗೆಯುವವರು ಇದ್ದೇ ಇರುತ್ತಾರೆ. ಅಂತಹ ಜನರ ಸಮೂಹ ಸೇರಿ ಹೊಲಗೇರಿ ಎಂದು ಕರೆಯಲ್ಪಡುತ್ತಿತ್ತು. ಒಂದು ಊರು ಎಂದ ಮೇಲೆ ಆ ಊರಿನ ಪಕ್ಕದಲ್ಲಿಯೇ ಹೊಲಗೇರಿ ಇರುತ್ತದೆ ಎಂಬುದು ಒಂದು ಅರ್ಥವಾದರೆ ಇಂತಹ ಹೊಲಗೇರಿಗಳಲ್ಲಿ ವಾಸಿಸುವ ಜನ ಹೊಟ್ಟೆಗೆ ಹಿಟ್ಟಿಲ್ಲದ ವಸತಿ, ಆಹಾರವಿಲ್ಲದ ಜನ, ಮೂಲತಃ ಸಮಾಜದಿಂದ ತಿರಸ್ಕಾರ, ನಿಂದನೆಗಳಿಂದ ಆಪಾದಿತವಾದಿ ಜನಾಂಗ ಕೊಳಕಿಗೆ ಹೆಸರಾದವರು ಇಂತಹ ಹೊಗೇರಿಯ ಜನ. ಈ ಗಾದೆಯು ಒಂದು ಜನಾಂಗದ ದೋಷಣೆಯ ಅಪಮಾನ ಮಾತಾಗಿ ಬಳಕೆಯಾದರೂ ಜನಸಮೂಹ ಇದ್ದ ಕಡೆ ಕೊಳಕು ಇದ್ದೇ ಇರುತ್ತದೆ. ಒಳ್ಳೆಯದರ ಜೊತೆಗೆ ಕೆಟ್ಟದ್ದು ಇದ್ದೇ ಇರುತ್ತದೆ. ಯಾವುದೇ ಕೆಡುಕಿಗೆ, ಕೊಳಕಿಗೆ ಈ ಗಾದೆಯ ಸಮರ್ಥನೆ ಕೊಡುತ್ತಾರೆ. ಈ ಗಾದೆಯು ಒಂದು ಜಾತಿ ದ್ಯೋತಕವಾಗಿ ಮನುಷ್ಯ ಕೆಟ್ಟ ವರ್ತನೆಗಳು, ಮನಸ್ಸುಗಳು, ಕೆಟ್ಟ ಕೆಲಸಗಳಿಗೆ ಪ್ರತೀಕವಾಗಿ ಬಳಕೆಯಾಗುತ್ತಿದೆ.

## ೧೧೩. "ನಾನು ಬಲ್ಲದ್ನ ನನ್ನೂರು ಗೌಡ ಬಲ್ಲನಾ"

ದಾಂಪತ್ಯದಲ್ಲಿ ಸಲ್ಲಾಪ–ವಿರಸಗಳಿರುತ್ತವೆ. ದಾಂಪತ್ಯದ ಯಶಸ್ಸಿಗೆ ಗಂಡು–ಹೆಣ್ಣಿನ ನಡುವೆ ಸಾಮರಸ್ಯ ಹೊಂದಾಣಿಕೆ ಇರಬೇಕು. ಅದೇ ದಾಂಪತ್ಯ ವಿರಸಕ್ಕೆ ಗಂಡು ಹೆಣ್ಣಿನ ವೈಮನಸ್ಸುಗಳು ಕಾರಣ. ಸುಖ ಸಂಸಾರ ಸದಾ ಸಮತೂಕ ಚಿತ್ತದಿಂದ ಸಾಗುತ್ತಿದ್ದರೆ, ಗಲಾಟೆ ಸಂಸಾರಗಳು ಸದಾ ಅಂತಃಕಲಹ, ವೈಮನಸ್ಸುಗಳಿಂದ ಜಿದ್ದಾಜಿದ್ದಿಯಾಗಿರುತ್ತವೆ., ಈ ಗಾದೆಯು ಒಂದು ರೀತಿಯ

ಹಾಸ್ಯಮಯವಾಗಿ ಬಳಕೆಯಾದರೆ ಅಂತರ್ಯದಲ್ಲಿ ತಿಳಿವು ಪ್ರಜ್ಞಾಪೂರ್ವಕವಾಗಿವೆ. ಗಂಡಹೆಂಡಿರ ನಡುವೆ ವಿರಸ ಉಂಟಾದ ಹೆಂಡತಿ ಗಂಡನಿಗೆ ಹೇಳುತ್ತಾಳೆ. "ನಾನು ನನ್ನ ಎಲ್ಲ ವಿಚಾರಗಳನ್ನು ಗೌಡರಿಗೆ ಹೇಳುತ್ತೇನೆ" ಎಂದು ಅಂದರೆ ಗೌಡರ ಹತ್ತಿರ ಹೇಳುವುದು ನ್ಯಾಯ ತೀರ್ಮಾನಕ್ಕೆಂದು ಗೊತ್ತಾಗುತ್ತದೆ. ಆದರೆ ಗಂಡ ಹೆಂಡತಿಗೆ ಹೇಳುತ್ತಾನೆ. ನಿನ್ನ ಎಲ್ಲಾ ಒಳವರ್ಮಗಳು ನನಗೆ ಗೊತ್ತು. ತನ್ನ ಹೆಂಡತಿಯ ವಿಚಾರ ಏನು ಎನ್ನುವುದು ನನಗೆ ಗೊತ್ತುವರೆತು ಊರಿನ ಗೌಡುಕೆ ಮಾಡುವ ಯಜಮಾನನಿಗೆ ಗೊತ್ತಿಲ್ಲ. ಒಬ್ಬ ವ್ಯಕ್ತಿಯ ಒಳವರ್ಮಗಳು ರಹಸ್ಯಗಳು, ಸ್ವಭಾವಗಳು ಹತ್ತಿರದ ಸಂಬಂಧಿಗೆ ಒಡನಾಡಿಗೆ ತಿಳಿದಿರುತ್ತದೆಯೇ ಹೊರತು ಅನ್ಯರಿಗೆ ಗೊತ್ತಿರುವುದಿಲ್ಲ. ಬೇರೆಯವರು ಆ ವ್ಯಕ್ತಿಯ ಗುಣನಡತೆಗಳನ್ನು ಕೇಳಿ ತಿಳಿದುಕೊಳ್ಳಬೇಕೇ ಹೊರತು ನಿಜವಾದ ಗುಣಸ್ವಭಾವಗಳು ಗೊತ್ತಾಗುವುದಿಲ್ಲ. ಒಬ್ಬ ವ್ಯಕ್ತಿಯ ವೈಯಕ್ತಿಕ ವಿಚಾರಗಳು ಆ ವ್ಯಕ್ತಿಗಿಂತ ತನ್ನ ಹತ್ತಿರ ನಿಕಟ ಸಂಬಂಧ ಇರುವವರಿಗೆ ಮಾತ್ರ ಹೆಚ್ಚಿಗೆ ತಿಳಿದಿರುತ್ತದೆ. ಮೇಲ್ನೋಟದ ಗುಣಸ್ವಭಾವಗಳಿಗಿಂತ ಅನುಭವದ ಒಡನಾಡಿತನದ ಸ್ವಭಾವಗಳು ಪ್ರಮಾಣಿಕವಾದವು. ಗಂಡನಿಗೆ ಮಾತ್ರ ಗೊತ್ತು ಹೆಂಡತಿಯ ಸ್ವಭಾವ.

**೧೧೪. "ಭಂಡ ಬದುಕಿನಂತೆ ಛಲಗಾರ ಕೆಟ್ಟನಂತೆ"**

ಮನುಷ್ಯನ ಸ್ವಭಾವಗಳು ನಾನಾ ರೀತಿವೆ. ಮೋಸ, ಧಗಾ, ವಂಚನೆ, ಕಪಟ, ವಂಚನೆ ಮುಂತಾದವು ಕೆಲವರ ಸ್ವಭಾವ. ಆದರೆ ಕರುಣೆ, ಪ್ರೀತಿ, ವಾತ್ಸಲ್ಯ, ಸ್ವಾಭಿಮಾನ, ಮುಗ್ಧತೆ ಕೆಲವು ವ್ಯಕ್ತಿಗಳ ಸ್ವಭಾವವಾಗಿರುತ್ತದೆ. ಭಂಡ ಸ್ವಭಾವಗಳಿರುವ ಮನುಷ್ಯರಿಗೆ ಮನ ಕಲಕುವಂತೆ ನಿಂದನೆ ಮಾಡಿದರೂ ಮತ್ತೆ ಅದೆಲ್ಲವನ್ನು ಮರೆತು ಹೊಂದಾಣಿಕೆ ಮಾಡಿಕೊಳ್ಳುತ್ತಾರೆ. ಭಂಡನ ಸ್ವಾಭಿಮಾನಕ್ಕೆ ಧಕ್ಕೆಯಾಗುವ ರೀತಿ ಹೀಯ್ಯಾಳಿಸಿದರೂ ಸ್ವಲ್ಪವೂ ಮನಸ್ಸಿಗೆ ಬೇಸರಪಟ್ಟುಕೊಳ್ಳುವುದಿಲ್ಲ. ಯಾರೂ ಏನನ್ನು ಹೀಯ್ಯಾಳಿಸಿಲ್ಲ, ಬೈದು ನಿಂದಿಸಿಲ್ಲವೆಂಬಂತೆ ವರ್ತಿಸಿ ಜೀವನ ಹೊಂದಾಣಿಕೆ ಮಾಡಿಕೊಳ್ಳುತ್ತಾರೆ. ಜೀವನ ಪೂರ್ತಿ ರೀತಿಯ ಹೊಂದಾಣಿಕೆಯಿಂದ ಜೀವನವನ್ನು ನಡೆಸುತ್ತಾರೆ ಭಂಡರು. ಆದರೆ ಛಲಗಾರರು ತನ್ನ ಸ್ವಾಭಿಮಾನಕ್ಕೆ ಸ್ವಲ್ಪ ಧಕ್ಕೆ ಬಂದರು ಸಹ ಸಹಿಸಿಕೊಳ್ಳುವುದಿಲ್ಲ. ನೆಲಕ್ಕೆ ಬಿದ್ದರೂ ಜಟ್ಟಿ ಮೀಸೆ ಮಣ್ಣಾಗಲ್ಲ ಎನ್ನುವ ಸ್ವಭಾವ ಚಲಗಾರನದು. ಮನಸ್ಸು ಮುರಿಯುವ ಯಾವುದೇ ಘಟನೆಗಳು ಸನ್ನಿವೇಶಗಳು ನಡೆದರೆ ಅದಕ್ಕೆ ವಿರುದ್ಧವಾಗಿ ನಡೆಯುವುದು ಛಲಗಾರನ ಹಠ. ಇಂತಹ ಉದಾಹರಣೆಗಳು ನಮ್ಮ ಅನಾದಿಕಾಲದ ಮಹಾಭಾರತ ಗ್ರಂಥಗಳಲ್ಲಿ ಕಾಣಬಹುದು. ಭೀಷ್ಮನ ಪ್ರತಿಜ್ಞೆ, ದ್ರೌಪದಿಯ ಪ್ರತಿಜ್ಞೆ, ಭೀಮ ಪ್ರತಿಜ್ಞೆಗಳು

ಸಾಕ್ಷಿಯಾಗಿವೆ. ಛಲಗಾರ ಕೆಡುವುದು ಎಂದರೆ ಅನಾವಶ್ಯಕವಾಗಿ ತೊಂದರೆಗಳಿಗೆ, ಸಂಕಷ್ಟಗಳಿಗೆ ಗುರಿಯಾಗುವುದು. ಆದರೆ ಭಂಡರ ಬದುಕು ಆಗಲಿಲ್ಲ ಇಂತಹ ತೊಂದರೆಗಳಿಗೆ ಗುರಿಯಾಗುವುದಿಲ್ಲ. ಜೀವನದಲ್ಲಿ ಭಂಡರ ಸಂಖ್ಯೆ ಹೆಚ್ಚಾಗಿದೆ.

ಇಂದಿನ ದಿನಗಳಲ್ಲಿ ರಾಜಕೀಯ ವ್ಯಕ್ತಿಗಳು ಭಮಡರಿಗೆ ಜ್ವಲಂತ ಸಾಕ್ಷಿ. ರಾಜಕೀಯ ವ್ಯಕ್ತಿಗಳು ಗೆಲ್ಲುವ ತನಕ ಎಲ್ಲಾ ಸೌಕರ್ಯಗಳನ್ನು, ಸವಲತ್ತುಗಳನ್ನು ಆಶ್ವಾಸನೆ ನೀಡಿ. ಗೆದ್ದ ತರುವಾಯ ಕೈಯೆತ್ತುವ ಸ್ಥಿತಿಯನ್ನು ನೋಡಬಹುದು. ಒಂದು ಪಕ್ಷ ಗೆದ್ದರೆ ಆ ಗೆದ್ದ ಪಕ್ಷದ ಪರವಾಗಿ ಅದೇ ಪಕ್ಷ ಅಧಿಕಾರ ಚುಕ್ಕಾಣಿ ಪಕ್ಷಾಂತರ ಮಾಡುವ ರಾಜಕೀಯ ಈ ವ್ಯಕ್ತಿಗಳು ಭಂಡರು.

**೧೧೩. "ಪ್ರಾಯಕ್ಕೆ ಬಂದ ಮಗಳ ಕಣ್ಣು ಹುಡುಗನ ಮೇಲೆ, ಮೀಸೆ ಕಣ್ಣು ಪ್ರಾಯಕ್ಕೆ ಬಂದ ಹುಡುಗನ ಕಣ್ಣು ದೇಶದ್ಮೇಲೆ"**

ಶೈಶಾವಸ್ಥೆ, ಯವ್ವನಾವಸ್ಥೆ, ವೃದ್ಧಾಪ್ಯ ಇವು ಮನುಷ್ಯನ ಜೀವಿತದ ಕಾಲಾವದಿ, ಶೈಶಾವಸ್ಥೆಯಲ್ಲಿ ಎಳೆತನದ ಆಟ, ಪಾಟ, ಮುಗ್ಧತೆ, ಹಠದ ಸ್ವಭಾವ, ಯಾವುದೇ ಜವಾಬ್ದಾರಿ ಏನು ಗೊತ್ತಿಲ್ಲದ್ದು ಮಗುವಿನ ಚಟುವಟಿಕೆಗಳು. ಯವ್ವನಾವಸ್ಥೆಯಲ್ಲಿ ಅನುಕರಣೆ, ಕಲಿಕೆ, ದುಡಿ, ಗಳಿಸುವುದು, ರಕ್ಷಣೆ, ಅಭಿವೃದ್ಧಿ ಬೆಳೆವಣಿಗೆಯ ಹಂತ ಯವ್ವನಾವಸ್ಥೆಯ ಚಟುವಟಿಕೆಗಳು, ವೃದ್ಧಾಪ್ಯದಲ್ಲಿ ಎಲ್ಲಾ ಜೀವನಾನುಭವಗಳಿಂದ ವಂಶಾಭಿವೃದ್ಧಿ, ಮಾರ್ಗದರ್ಶನ, ಉಪದೇಶ, ವಿಶ್ರಾಮ ಇವು ವಯಸ್ಸಿನ ಅಂತಿಮ ಚಟುವಟಿಕೆಗಳು, ಮಾನವನ ವಯಸ್ಸಿನ ಅತೀ ಮುಖ್ಯವಾದ ಘಟ್ಟ ಯವ್ವನಾವಸ್ಥೆ. ಈ ವಯಸ್ಸಿನಲ್ಲಿ ಗಂಡು ಹೆಣ್ಣಿನ ಹೊಣೆಗಾರಿಕೆ, ಕರ್ತವ್ಯ ಯಾವ ರೀತಿಯದು ಎಂದು ಮನವರಿಕೆಯಾಗುತ್ತದೆ. ಹೆಣ್ಣು ಮಗಳಿನ ಜವಾಬ್ದಾರಿ ಯವ್ವನಕ್ಕೆ ಬಂದಮೇಲೆ ಹುಡುಗನನ್ನು ನೋಡುವುದು ಅವಳಿಗೆ ಯಾವುದೇ ಸಾಮಾಜಿಕ ಜವಾಬ್ದಾರಿ ಇಲ್ಲ. ಅದೇ ಪ್ರಾಯಕ್ಕೆ ಬಂದ ಗಮಡು ಹುಡುಗನ ದೃಷ್ಟಿ ದೇಶದ ರಕ್ಷಣೆ, ಗಂಡಿಗೆ ಸಾಮಾಜಿಕ ಹೊಣೆಗಾರಿಕೆ ಹೆಚ್ಚು. ಅಂದರೆ ಇಲ್ಲಿ ಹೆಣ್ಣು ಗಂಡಿನ ಕರ್ತವ್ಯದಲ್ಲಿ ತಾರತಮ್ಯವಿದೆ. ಗಂಡಿನ ಜವಾಬ್ದಾರಿ ಹೆಚ್ಚು. ಪುರುಷತ್ವದ ಸ್ವಭಾವ ಎದೆಗಾರಿಕೆ ರಾಷ್ಟ್ರ ರಕ್ಷಣೆ, ಹೆಣ್ಣಿಗೆ ಸಾಮಾಜಿಕ ಜವಾಬ್ದಾರಿ ನಿರ್ವಹಿಸಲು ಅನರ್ಹಳು. ಒಬ್ಬರ ಕರ್ತವ್ಯ ಸುಖಮಯವಾಗಿದ್ದರೆ ಒಬ್ಬರ ಕರ್ತವ್ಯ ಕಷ್ಟದಾಯಕ.

ಒಂದು ಮನೆಗೆ ಹೆಣ್ಣು ಮತ್ತು ಗಂಡು ಎರಡು ಮಕ್ಕಳಿದ್ದು ಹೆಣ್ಣುಮಗಳು ತನ್ನ ಇನಿಯನನ್ನು ಸೇರುವ ತವಕವಿದ್ರೆ, ಅವಳ ಕಣ್ಣು ವಯಸ್ಸಿಗೆ ಬಂದ ಮೀಸೆ ಹುಡುಗನ ಮೇಲೆ ಅದೇ ಮನೆಯ ಪ್ರಾಯಕ್ಕೆ ಬಂದ ಗಂಡು ಮನೆಯ ಕೌಟುಂಬಿಕ ಜವಾಬ್ದಾರಿಯ

ಜೊತೆಗೆ ದೇಶದ ಜವಾಬ್ದಾರಿಯ ಹೊಣೆಗಾರಿಕೆಯನ್ನು ಹೊತ್ತಿರುತ್ತಾನೆ. ಆದರೆ ಇದು ಎಲ್ಲಾ ಗಂಡಿಗೂ, ಎಲ್ಲಾ ಹೆಣ್ಣಿಗೂ ಅನ್ವಯಿಸುವುದಿಲ್ಲ. ಈ ಆಶಯ ಎಲ್ಲಾ ಕಾಲಕ್ಕೂ ಅನ್ವಯಿಸುವುದಿಲ್ಲ. ಹೆಣ್ಣಿಗೂ ಆಶೆ ಇರುವಂತೆ ಗಂಡಿಗೂ ಆಶೆ ಇರುತ್ತದೆ. ಗಂಡಿಗೆ ಜವಾಬ್ದಾರಿ ಇರುವಂತೆ ಹೆಣ್ಣಿಗೂ ಜವಾಬ್ದಾರಿಯು ಇರುತ್ತದೆ. ಈಗಿನ ಯುಗದಲ್ಲಿ ಹೆಣ್ಣು ಗಂಡು ಸಮಪಾಲುದಾರರು.

**೧೧೬. "ಉಗುರಲ್ಲಿ ಹೋಗದ್ದ ಕೊಡಲಿ ತಗಕೊಂಡು ಕೊಚ್ಚಿದ್ರಂತೆ"**

ಕೌಶಲ, ನಿಪುಣತೆ, ಬುದ್ಧಿವಂತಿಕೆ, ಉಪಾಯ ಇವು ಒಂದು ಕಾರ್ಯ ಸಾಧನೆಗೆ ಅಗತ್ಯ ಹೊರತು ಅತಿಯಾದ ಶ್ರಮ ಮುಖ್ಯವಲ್ಲ. ಯಾವುದೇ ಕೆಲಸ ಮಾಡುವುದಕ್ಕೆ ಬುದ್ಧಿವಂತಿಕೆ ಬೇಕು ಶ್ರಮ ಅಗತ್ಯವಿಲ್ಲ ಎಂಬುದು ಸೂಚ್ಯ.

ಜನರು ದಿನನಿತ್ಯ ಚಟುವಟಿಕೆಯಲ್ಲಿ ತೊಡಗಿರುತ್ತಾರೆ. ಆ ಚಟುವಟಿಕೆಗಳು ಸಾಮಾನ್ಯವಾಗಿರುವುದು ಅಥವಾ ಶ್ರಮದಾಯಕವಾಗಿರುವುದು. ಆದರೆ ಅದನ್ನು ನಿರ್ವಹಿಸುವ ಜವಾಬ್ದಾರಿಯನ್ನು ಪ್ರತಿಯೊಬ್ಬರೂ ತಮ್ಮದೇ ಆದಂತಹ ರೀತಿಯಲ್ಲಿ ಕೈಗೊಳ್ಳುವರು ಅದು ಮನೋರಂಜನೆಯಾಗಿರಲಿ ದುಡಿಮೆಯಾಗಿರಲಿ ಹಾಗೂ ಕಛೇರಿಯ ಕೆಲಸವಾಗಲಿ ಯಾವ ಕ್ಷೇತ್ರದಲ್ಲೇ ಆಗಲಿ ಅದರಲ್ಲಿ ಯಶಸ್ಸನ್ನು ಕಾಣುವ ಸಲುವಾಗಿ ಮಾಡುವ ಪರಿ ಅಷ್ಟಿಷ್ಟಲ್ಲ ಅದರ ಗುರಿ ಸಾಧನೆಗಾಗಿ ಅಂದರೆ ಅದರಿಂದ ಯಾವುದೇ ಫಲವನ್ನು ಪಡೆಯುವುದಕ್ಕಾಗಿ ಕೈಗೊಳ್ಳುವ ವಿಧಾನಗಳು ಬೇರೆ ಬೇರೆ ರೀತಿಯಲ್ಲಿ ಇರುತ್ತವೆ. ಒಂದೇ ತೆರನಾದ ಕೆಲಸಕ್ಕೆ ಬೇರೆ ಬೇರೆ ವಿಧಾನ ಬಳಸಿ ಮಾಡಿದರೂ ಅದರಲ್ಲಿ ಸುಲಭ ಕಠಿಣ ಎಂಬಂತೆ ಕಾಣಬಹುದು ಈ ರೀತಿಯಾಗಿ ಸರಳ ಹಾಗೂ ಕಡಿಮೆ ಅವಧಿಯಲ್ಲಿ ಮಾಡಬಲ್ಲ ಕೆಲಸಗಳನ್ನೆಲ್ಲ ಹೆಚ್ಚು ಕಠಿಣ ಶ್ರಮವಹಿಸಿ ಹೆಚ್ಚು ಸಮಯ ಬಳಸಿ ಕೆಲಸ ಮಾಡುತ್ತಾರೆ. ಇದು ಅವರವರ ಮನೋಸ್ಥಿತಿಗೆ ಅನ್ವಯಿಸುತ್ತದೆ. ಅವರ ಮನಸ್ಸು ಮತ್ತು ಕೈಗೊಳ್ಳುವ ಕಾರ್ಯದಲ್ಲಿ ನಿಖರತೆ ನಿರ್ದಿಷ್ಟತೆ ಒಮ್ಮನಸ್ಸು ಇದ್ದರೆ ಎಂತಹವರು ಸರಳವಾಗಿಯೇ ಕೆಲಸ ಮಾಡುವರು. ಒಲ್ಲದ ಮನಸ್ಸಿದ್ದು ಬೇಡವೆಂಬ ಭಾವನೆ ಇದ್ದರೆ ಆಯಾಸವಾದಂತೆ ಮಾಡಿ ಕಾರ್ಯ ಸಾಧನೆಯಲ್ಲಿ ಗುರಿ ಮುಟ್ಟಲಾರರು. ಅದನ್ನು ಮುಗಿಸಲಾರರು. ಆದುದರಿಂದ "ಮನಸ್ಸಿದ್ದರೆ ಮಾರ್ಗ" ಎನ್ನುವಂತೆ ಯಾವ ಕೆಲಸವನ್ನು ಎಂದು ಯಾವುದರಲ್ಲಿ ಹೇಗೆ ಮಾಡಬೇಕೋ ಹಾಗೆ ಮಾಡಿದರೆ ಮಾತ್ರ ಅದು ಸಾಧ್ಯವಾದೀತು.

**೧೧೭. "ಹುಟ್ಟಿಸಿದ ಶಿವ ಹುಲ್ಲು ಮೇಯಿಸುವುದಿಲ್ಲ"**

ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಂದು ಜೀವಿಗೂ ಜೀವಿಸುವ ಬದುಕಿಸುವ ಅವಕಾಶ ಇದೆ. ಪ್ರತಿಯೊಂದು ಜೀವಿಗೂ ಅನ್ನ, ನೀರು ಮುಂತಾದ

ಸೌಕರ್ಯಗಳನ್ನು ಒದಗಿಸುತ್ತಾನೆ. ಪ್ರತಿಯೊಂದು ಜೀವಿಗೂ ಆಸರೆಯನ್ನು ದೇವರು ಕಲ್ಪಿಸಿಕೊಡುತ್ತಾನೆ. ಬಳ್ಳಿಗೆ ಹೇಗೆ ಮರ ಆಸರೆಯಾಗಿರುವಂತೆ ಪ್ರತಿಯೊಬ್ಬ ಮನುಷ್ಯನಿಗೆ ಶಿವ ಕಾವಲಾಗಿ ರಕ್ಷಣೆಯನ್ನು ಕೊಡುತ್ತಾನೆ. ಬದುಕಲು ಒಂದಲ್ಲ ಒಂದು ಮಾರ್ಗವನ್ನು ತೋರಿಸುತ್ತಾನೆ. ಎಲ್ಲರೂ ಶ್ರೀಮಂತರಾಗಿರಲು ಸಾಧ್ಯವಿಲ್ಲ. ಬಡವರಾದ ವ್ಯಕ್ತಿಗಳು ನಮಗೂ ಒಂದಲ್ಲ ಒಂದು ದಿನ ಒಳ್ಳೆಯದಾಗುತ್ತದೆ, ಕಾಲಚಕ್ರ ಉರುಳಿದಾಗ ಅವಕಾಶ ಸಿಕ್ಕಾಗ ನಾವು ಉತ್ತಮಸ್ಥಿತಿಗೆ ಬರುತ್ತೇವೆ ಎಂಬುವುದು ಸೂಚ್ಯ. ಮಾನವನ ಪಾತ್ರ ಮುಗಿಯುವ ತನಕ ಈ ಜಗತ್ತಿನ ರಂಗದಲ್ಲಿ ಒಂದಲ್ಲ ಒಂದು ದಾರಿ ಇರುತ್ತದೆ. ಮಾನವನ ಆಹಾರ ಅಕ್ಕಿ, ರಾಗಿ, ಬೇಳೆ, ತರಕಾರಿಗಳಾಗಿವೆ. ಇವನ್ನು ತಿಂದು ಬದುಕುವುದು ಮಾನವ. ಇಂತಹ ವ್ಯಕ್ತಿ ಪ್ರಾಣಿಪಕ್ಷಿಗಳು ತಿನ್ನುವ ಹುಲ್ಲನ್ನು ತಿನ್ನುವಂತೆ ಮಾಡುವುದಿಲ್ಲ. ದೇವರ ಸೃಷ್ಟಿಯಲ್ಲಿ ಮನುಷ್ಯನನ್ನು ಹೀನಾಯ ಸ್ಥಿತಿಗೆ ತಳ್ಳುವುದಿಲ್ಲ.

**೧೧೮. "ಮಾರಿಕೊಂಡು ಹೋಗೋಳು ಮನೆ ಮಾಡ್ಯಾಳಾ"**

ಹೋಗುತ್ತೇನೆ, ಮಾರುತ್ತೇನೆ ಎನ್ನುವವರು ಒಂದು ಸ್ಥಿತಿ ನೆಲೆಯಲ್ಲಿ ನಿಲ್ಲುವುದು ಅಸಾಧ್ಯ. ಮನೆಯಲ್ಲಿರುವ ಎಲ್ಲಾ ವಸ್ತುಗಳನ್ನು ಮಾರಿ ಬರಿ ಮನೆಯಾಗುತ್ತದೆ. ಇದ್ದುದ್ದನ್ನೂ ಮಾರಿ ಮನೆಕಟ್ಟುವುದು ಅಸಾಧ್ಯ. ಮಾರಿಕೊಂಡು ಹೋಗು ಎಂಬುದು ಎಳ್ಳಷ್ಟು ಉಳಿಸಿದಂತೆ ನಾಶಮಾಡುವುದು ದುಡ್ಡಿನ ಆಶೆಗೆ ಎಲ್ಲವನ್ನು ಮಾರುವುದು ಇಂತಹ ಹೆಣ್ಣು ಸಂಸಾರ ಮಾಡಲು ಸಂಸಾರ ಕಟ್ಟಲು ಸಾಧ್ಯವಿಲ್ಲ. ಹೆಣ್ಣು ಸಂಸಾರದ ಕಣ್ಣು ಅಂತಹ ಸಂಸಾರ ಸುಭೀಕ್ಷೆಗೆ ಕೂಡಿ ಹಾಕುವ ಸ್ವಭಾವದವಳಾಗಿರಬೇಕು. ಸ್ವಲ್ಪ ಸ್ವಲ್ಪವಾಗಿ ಶೇಖರಿಸಿಕೊಳ್ಳಬೇಕು. ಕಳೆಯುವುದು ಸುಲಭ ಆದರೆ ಅದನ್ನು ಸಂಪಾದಿಸುವುದು ಕಷ್ಟ. ಕಳೆಯುವುದಕ್ಕಿಂತ ಕೂಡುವುದು ಲೇಸು, ಆಗ ಒಂದು ಸಂಸಾರ ನೆಲೆಕಾಣಲು ಸಾಧ್ಯ. ಇವತ್ತಿನ ಯುಗದಲ್ಲಿ ಕಾಸಿಗೆಕಾಸು ಗಂಟು ಹಾಕುವುದು ಲೇಸು.

**೧೧೯. "ದನ ಕಾಯ ಹುಡುಗನಿಗೆ ಗೌಡಿಕೆ ಕೊಡವತ್ತಿಗೆ ವಡೆ ಹೊಲ ಕೂದು ಒಟ್ಟಿದ್ದನಂತೆ"**

ಯಜಮಾನಿಕೆಯ ಪಟ್ಟವನ್ನು ಯಾರಿಗೆ ಕೊಡಬೇಕು, ಯಾರಿಗೆ ಕೊಡಬಾರದು ಎಂಬ ನಿರ್ಣಯ. ಅರ್ಹತೆಯು ಬಹಳ ಮುಖ್ಯ. ಅರ್ಹತೆ ಇಲ್ಲದವನು ಯಾವುದೇ ಕೆಲಸ ಮಾಡಲು ಅನರ್ಹ, ಅನುಭವ ವ್ಯಕ್ತಿ ಸನ್ನಿವೇಶ ಸಂದರ್ಭಗಳ ಪರಿಜ್ಞಾನ ಇರುತ್ತದೆ. ಸಮಯ ಸಂದರ್ಭ ನೋಡಿ ನಿರ್ಣಯಗಳನ್ನು, ಜವಾಬ್ದಾರಿಗಳನ್ನು

ನಿಬಾಯಿಸುತ್ತಾರೆ. ಹಿಂದಿನ ಕಾಲದಲ್ಲಿ ಕುರಿ, ದನ ಕಾಯಲು ಬುದ್ಧಿಹೀನರಾದವರು, ಚಿಕ್ಕಹುಡುಗರು, ಯೌವನಕ್ಕೆ ಬಾರದವರನ್ನು ಕಳುಹಿಸುತ್ತಿದ್ದರು. ದನಕಾಯುವ ಹುಡಗನಿಗೆ ಯಜಮಾನಿಕೆ ಕೊಟ್ಟಾಗ ಆಗ ಕಾಳುಕಟ್ಟಿರುವ ಸಂಪೂರ್ಣ ಬೆಳೆಬಾರದಿರುವ ಪಸಲನ್ನು ಕುಯ್ದು ಗುಪ್ಪು ಹಾಕಿಸುತ್ತಾನೆ. ಯಾವುದಕ್ಕೂ ಪ್ರಯೋಜನಕ್ಕೆ ಬಾರದ ಕೆಲಸವನ್ನು ಮಾಡಿಸುತ್ತಾನೆ. ಅದಕ್ಕೆ ಅಂತಹ ಹುಡುಗನಿಗೆ ನಿಷ್ಪ್ರಯೋಜಕನಿಗೆ ಅಧಿಕಾರ ಕೊಡುವುದು ಸರಿಯಲ್ಲ. ಮಂಗನ ಕೈಯಲ್ಲಿ ಮಾಣಿಕ್ಯವನ್ನು ಕೊಟ್ಟಂತಾಗುತ್ತದೆ. ಅಸಮರ್ಥ ಹುಡುಗನಿಗೆ ಸಮರ್ಥ ಅಧಿಕಾರ ಕೊಡಬಾರದು.

**೧೨೦. " ಅತ್ತ ತಡಿನಾರದವಳು ಅಳಿಮಯ್ಯನ ಕುಟಿ ಉಂಡಳಂತೆ"**

"ಮನುಷ್ಯನಿಗೆ ಆತುರ ಕಾತುರಗಳು ಅಧಿಕ. ತಾನು ಎಲ್ಲದರಲ್ಲೂ ಮೊದಲಿರಬೇಕು ನನಗೆ ಮೊದಲು ಸಿಕ್ಕಬೇಕು. ನನಗೆ ಮೊದಲ ಆಧ್ಯತೆ ನಾನು ಮೊದಲು ತಿನ್ನಬೇಕು ಎಂಬ ಅವಸರ ಆತುರಗಳು ಈ ಗಾದೆಯಲ್ಲಿ ವ್ಯಕ್ತವಾಗಿದೆ. ತಾಳ್ಮೆ ಇಲ್ಲದ ಮನುಷ್ಯ ಅನಾಗರಿಕ ರೀತಿ ವರ್ತಿಸುವುದನ್ನು ಕಾಣಬಹುದು. ಮನಸ್ಸಿನ ಪರಿ ಪಕ್ವತೆ ಮುಖ್ಯ ಎಂಬುವುದನ್ನು ತಿಳಿಸುತ್ತದೆ. ಮನಸ್ಸು ಹಿಡಿತವಿಲ್ಲದ ಅತ್ತೆ ಅಳಿಮಯ್ಯನ ಜೊತೆ ಕುಳಿಕೊಂಡು ಊಟ ಮಾಡಿದಳಂತೆ. ಅತ್ತೆಯಾದವಳು ಅಳಿಮಯ್ಯನಿಗೆ ಊಟವನ್ನು ಬಡಿಸಿ ಊಟಮಾಡಬೇಕು. ಅದು ಬಿಟ್ಟು ಮಗಳ ಗಂಡ ಅಳಿಮಯ್ಯನ ಜೊತೆ ಕುಳಿತುಕೊಂಡು ಸರಿಸಮಾನವಾಗಿ ಉಟ ಮಾಡುವುದು ಅಸಭ್ಯ ವರ್ತನೆ. ಮನುಷ್ಯ ಆದವನಿಗೆ ಒಂದು ಬಿಗಿ ಹಿಡಿತವಿರಬೇಕು. ತನ್ನನ್ನು ತಾನು ನಿಯಂತ್ರಿಸಿಕೊಳ್ಳುವ ಮನಸ್ಸು ಮುಖ್ಯ. ಕುದುಕುಲು ಜೀವನ ಅತ್ತೆ ಸೂಜಿಯಲ್ಲಿ ತುಪ್ಪ ಬಿಡುತ್ತಿದ್ದಳಂತೆ . ಅಳಿಮಯ್ಯ ಆದವನು ತುಪ್ಪದ ಕುಡುಕೆಯನ್ನು ಅತ್ತೆ ಬರುವತ್ತಿಗೆ ಜಿನಿಗಿಸಿದನಂತೆ. ಅತ್ತೆ ಬಂದು ತುಪ್ಪವನ್ನು ಅಳಿಮಯ್ಯನಿಗೆ ಬಿಟ್ಟಾಗ ಸೂಜಿಗೆ ತುಪ್ಪ ಬರಲಿಲ್ಲ, ಬಗ್ಗಿಸತ್ತೆ ಎಂದಾಗ ಕುಡಿಕೆಯಲ್ಲಿರುವ ತುಪ್ಪವನ್ನು ಅಂಗಳಕ್ಕೆ ಬೀಳುತ್ತದೆ. ತಡೆಯಲಾರದೆ ಅತ್ತೆ ಅಳಿಮಯ್ಯನ ಜೊತೆಗೆ ಕೂತ್ಕೊಂಡು ಊಟ ಮಾಡುವ ಸಂದರ್ಭ.

**೧೨೧. "ಉರಿದೋನು ಊರಲಿಲ್ಲ, ಮೆರೆದೋನು ನಾಡಲಿಲ್ಲ"**

ಕೋಪಿಷ್ಟ ಮನುಷ್ಯನ ಅಹಂಕಾರ, ದರ್ಪ, ಅಟ್ಟಹಾಸ, ಕೆಡುಕುಗಳು ಈ ಗಾದೆಗಳಲ್ಲಿ ವ್ಯಕ್ತವಾಗಿದೆ. ಬೇರೆಯವರಿಗೆ ಕೆಡುಕನ್ನು ಮಾಡುತ್ತಾ ತನ್ನ ಕೋಪೋದ್ರೇಕ ಸ್ವಭಾವದಿಂದ ಜನರನ್ನು ಭಯಭೀತಗೊಳಿಸುವ ವ್ಯಕ್ತಿ ಬಹಳ ಕಾಲ ಉಳಿಯುವುದಿಲ್ಲ.

ಒಳ್ಳೆಯ ಕೆಲಸ ಮಾಡಿದರೆ ಆಯಸ್ಸು ಮುಗಿಯುವ ಮುಂಚೆ ಅಕಾಲ ಮರಣಕ್ಕೆ ತುತ್ತಾಗುತ್ತಾರೆ. ಮಹಾಭಾರತ, ರಾಮಾಯಣ ಪುಣ್ಯ ಕಥೆಗಳು ಮಾನವನ ಜೀವನದ ಎಲ್ಲಾ ಘಟ್ಟಗಳನ್ನು, ಮಜಲುಗಳನ್ನು ಬಿಂಬಿಸುತ್ತದೆ. ರಾವಣ ಮತ್ತು ದುರ್ಯೋಧನ ಇಬ್ಬರೂ ಅಧಿಕಾರ ಅಟ್ಟಹಾಸದಿಂದ ಸೀತೆ, ದ್ರೌಪದಿಯನ್ನು ಚಿತ್ರವಧೆ ಮಾಡಿ ಅಂತಿಮವಾಗಿ ಸರ್ವನಾಶವಾಗಿರುವುದನ್ನು ಕಾಣಬಹುದು. ಯಾವುದನ್ನೇ ಆಗಲಿ ಪ್ರೀತಿಯಿಂದ ಪಡೆಯಬೇಕೇ ಹೊರತು ಅಧಿಕಾರ, ದರ್ಪ,ಬಲವಂತಗಳಿಂದ ಏನನ್ನು ಗಳಿಸಲು, ಪಡೆಯಲು ಸಾಧ್ಯವಿಲ್ಲ.

ಇಡೀ ಊರಿಗೆ ಅಲ್ಲೋಲ ಕಲ್ಲೋಲ, ಮೋಸ, ಕೊಲೆ, ಕಳ್ಳತನ ಈ ರೀತಿಯ ದುಷ್ಟ ವರ್ತನೆಗಳಿಂದ ಅನ್ಯರಿಗೆ ಚಿತ್ರ ಹಿಂಸೆ ಕೊಡದೆ, ದಾನಧರ್ಮ, ಕರುಣೆ, ಸಹಾಯಗಳಿಂದ ನೂರುಕಾಲ ಬಾಳುವುದು ಒಳಿತು. ಕೆಟ್ಟದಕ್ಕೆ ಬೇಗ ಸರ್ವನಾಶ ಎಂಬುದು ಪ್ರತೀತಿ.

**೧೨೨. "ರಾಗಿ ಬೀಸರು ಸತ್ತರೆ ರಾಗಿ ಹುಯ್ಯಕೊಂಡು ತಿಂತಾರ"**

ಯಾರಿಗೆ ಯಾರೂ ಅನಿವಾರ್ಯ ಅಲ್ಲ, ಯಾರಿಲ್ಲವೆಂದರೆ ಬದುಕು ಮುಂದೆ ಸಾಗುತ್ತೆ. ರಾಗಿಯನ್ನು ರಿಟ್ಟು ಮಾಡುವವರು ಸತ್ತರೆ ಮುದ್ದೆ ಮಾಡಲು ಬರಿ ರಾಗಿಯನ್ನೇ ತಿನ್ನಲು ಆಗುತ್ತಾ ಬೇರೆಯವರ ಹತ್ತಿರ ಹಿಟ್ಟು ಮಾಡಿಸಿಕೊಂಡು ಊಟ ಮಾಡಬಹುದು. ಮನುಷ್ಯ ತಾನು ಎಲ್ಲರಿಗೂ ಬೇಕಾದವನು ತಾನು ಇಲ್ಲವೆಂದರೆ ಚಟುವಟಿಕೆಗಳೆಲ್ಲಾ ಸ್ಥಗಿತವೆಂದುಕೊಳ್ಳುವವರು ಈ ಪ್ರಪಂಚದಲ್ಲಿದ್ದಾರೆ. ರೈತರು, ಕಾರ್ಮಿಕರು, ಕೂಲಿಯಾಳುಗಳು, ರಾಜಕಾರಣಿ, ದರ್ಜಿಗಳು, ಅಗಸರು, ಕುಡಿಕೆಮಾಡುವವರು ಮುಂತಾದ ವೃತ್ತಿಗಳ ಸೇವೆ ಅಗತ್ಯ. ಆದರೆ ಈ ಸೇವೆಗಳು ಬದುಕಿನ ಅನಿವಾರ್ಯತೆ, ಜೊತೆ ಅದೇ ವೃತ್ತಿಗಳನ್ನು ನಿಭಾಯಿಸುವವರು ಬೇರೆಯವರಿದ್ದಾರೆ ಬದುಕಲು ರಹದಾರಿಗಳು ಹಲವು ಇವೆ.

**೧೨೩. "ಜಗಜಾಲಿಸುವಳಿಗೆ ಮಗು ಒಂದು ಅಡಿಬಾರ ಅಂತಹ ಹೇಳುತ್ತಾಳೆ"**

ಏನು ಬೇಕಾದರೂ ಮಾಡುತ್ತೇನೆ ಆದರೆ ಒಂದೇ ಒಂದು ಸಣ್ಣ ಕೆಲಸ ಮಾಡುವುದಕ್ಕೆ ಆಗುವುದಿಲ್ಲ ಎಂಬುವುದು ಇಡೀ ಜಗತ್ತನ್ನೇ ಸುತ್ತಾಡುವವಳಿಗೆ ಮಗುವಿನ ಸಾಕಿಸಲಹುವುದು ಕಷ್ಟವೆಂದು ಹೇಳುತ್ತಾಳೆ. ಊರೆಲ್ಲ ಸುತ್ತಾಡುವ ಗಿರಿಸಕ್ತಿಗೆ ಮನೆಯ ಕೆಲಸ ಮಾಡಲು ಆಗುವುದಿಲ್ಲ. ಬೆಟ್ಟದಮತಹ ದೊಡ್ಡ ದೊಡ್ಡ ಕೆಲಸ ಮಾಡುತ್ತೇನೆಂದು ಹೇಳುವವರು ಒಂದು ಸಣ್ಣ ಕೆಲಸ ಮಾಡಲು ಆಗುವುದಿಲ್ಲ ಎನ್ನುವವರು ಯಾವ ಕೆಲಸವನ್ನು ಮಾಡಲಾಗುವುದಿಲ್ಲ.

ತಾಯಿಗೆ ಮಗು ಬಾರವಾಗಲು ಸಾಧ್ಯವಿಲ್ಲ. ಇಡೀ ಜಗತ್ತನ್ನೇ ಸುತ್ತುವ ಹೊರುವ ತಾಯಿಗೆ ಮಗು ಬಾರವಾಗಲು ಸಾಧ್ಯವೆ. ತಾಯಿಗೆ ಅಸಾಧ್ಯವಾದದ್ದು ಯಾವುದೂ ಇಲ್ಲ ಮನುಷ್ಯನಿಗೆ ಅಸಾಧ್ಯವಾದದ್ದು ಒಂದು ಸಣ್ಣ ಕೆಲಸವೂ ಇಲ್ಲ.

**೧೨೪. "ಹಲ್ಲು ಬಂದ ಕರ ಬಗ್ಗಲ್ಲಾ"**

ಬೆಳೆಯುವ ಸಿರಿ ಮೊಳಕೆಯಲ್ಲಿ ಬೆಳವಣಿಗೆಯಲ್ಲಿ ಅದು ಹೆಮ್ಮರವಾಗುತ್ತದೆ. ಎಲ್ಲರಿಗೂ ಬೇಕಾಗುವ ಮರವಾಗುತ್ತದೆಂದು ಗೊತ್ತಾಗುತ್ತದೆ. ಚಿಕ್ಕದರಲ್ಲಿ ಇರುವಾಗ ನಮಗೆ ಬೇಕಾದ ಹಾಗೆ ಬೆಳೆಸಿಕೊಳ್ಳಬೇಕು. ಪ್ರಾಣಿಗಳಾಗಲಿ, ಪಕ್ಷಿಗಳಾಗಲಿ, ವ್ಯಕ್ತಿಗಳಾಗಲಿ ಯಾವುದೇ ಆಗಲಿ ಉತ್ತಮಾಂಶಗಳಿಂದ, ಒಳ್ಳೆಯ ನಡವಳಿಕೆ ಸ್ವಭಾವಗಳಿಂದ ಬೆಳೆಸಬೇಕು. ಚಿಕ್ಕದರಲ್ಲಿ ಏನು ಕೇಳಿದರೂ, ಹೇಳಿದರೂ ಮಾಡುವ ಮನಸ್ಥಿತಿ ಇರುತ್ತದೆ. ಚಿಕ್ಕಂದಿನಿಂದಲೇ ಹೇಗೆ ಬೇಕು ಹಾಗೆ ಬೆಳೆಯಲು ಬಿಟ್ಟು ಯೌವ್ವನಕ್ಕೆ ಬಮದಾಗ ಅಂಕುಶ ಹಾಕಲು ಹೊರಟಾಗ ಮಾತು ಕೇಳುವುದಿಲ್ಲ ವ್ಯಕ್ತಿಗಳು ಮನುಷ್ಯರು.

ಕರುವನ್ನು ಚಿಕ್ಕಂದಿನಿಂದಲೇ ನೊಗವನ್ನು ಹಾಕಿ ಬೇಕಾದ ರೀತಿ ತಿದ್ದಿಕೊಳ್ಳಬೇಕು. ಅದೇ ಕರುವು ಹಲ್ಲು ಬಂದ ಮೇಲೆ ಏನೇ ಮಾಡಿದರು ಬೇಸಾಯ ಮಾಡಲು ಹೋದರೆ ಬಗ್ಗಿಸಲು ಸಾಧ್ಯವಾಗುವುದಿಲ್ಲ. ತುಂಬಾ ಪರಿಶ್ರಮ ಪಡಬೇಕಾಗುತ್ತದೆ. ಉದಾಹರಣೆ ಎಂದರೆ ಆಶ್ರಮದ ಗಿಳಿ ಮತ್ತು ಕಟುಕನ ಗಿಳಿ. ಆಶ್ರಮದ ಗಿಳಿ ಮನೆಗೆ ಬಂದವರನ್ನು ಬನ್ನಿ ಕುಳಿತುಕೊಳ್ಳಿ ಎಂದು ಉಪಚರಿಸಿದರೆ, ಕಟುಕನ ಗಿಳಿ ಬಂದವರನ್ನು ಹಿಡಿಯಿರಿ, ಕೊಚ್ಚಿ, ಕತ್ತರಿಸಿ ತುಂಡು ತುಂಡು ಮಾಡಿ ಎಂದು ಉದ್ಗರಿಸುತ್ತದೆ. ಬೆಳೆಯುವ ವಾತಾವರಣ ವ್ಯಕ್ತಿಗೆ ಬಹಳ ಮುಖ್ಯ. ಒಬ್ಬ ವ್ಯಕ್ತಿಗೆ ಒಳ್ಳೆಯ ವಾತಾವರಣ ಒಳ್ಳೆಯದನ್ನು, ಕೆಟ್ಟ ವಾತಾವರಣ ಕೆಟ್ಟದನ್ನು ಕಲಿಸುತ್ತದೆ. ಸಸಿಯಾಗಿದ್ದಾಗ ಬಾಗಿ ಬೀಳದಂತೆ ಮರವಾದಾಗ ಬಾಗುವುದಿಲ್ಲ. ವ್ಯಕ್ತಿಗಳು ಚಿಕ್ಕ ವಯಸ್ಸಿನಲ್ಲಿ ಬುದ್ಧಿ ಮಾತುಗಳನ್ನು ಕೇಳುವಂತೆ ದೊಡ್ಡವರಾದಾಗ ಕೇಳುವುದಿಲ್ಲ. ಮಾತಿಗೆ ಪ್ರತಿ ಮಾತುಗಳನ್ನು ಹೇಳುತ್ತಾರೆ.

ಒಂದು ದೇಶಕ್ಕೆ ಉತ್ತಮ ವ್ಯಕ್ತಿಗಳನ್ನು ಕೊಡುವುದು ತಂದೆ ತಾಯಿಗಳ ಆದ್ಯ ಕರ್ತವ್ಯ. ಆದರೆ ಒಳ್ಳೆಯ ಅಪ್ಪ ಅಮ್ಮನಿಗೆ ಒಳ್ಳೆಯ ಮಕ್ಕಳಾಗುವುದಿಲ್ಲ. ಉತ್ತಮ ಮಕ್ಕಳು ದೇಶ ಆಸ್ತಿ, ಆದರೆ ವಾತಾವರಣ ಯಾರನ್ನಾದರೂ ಒಳ್ಳೆಯವರು ಕೆಟ್ಟವರನ್ನಾಗಿ ಮಾಡುತ್ತದೆ.

**೧೨೫. "ತಿರ್ಕಾ ಮೂರ್ಕಾಸು ಸಂಪಾದನೆ ಮಾಡಿ ಬರು ಬುರಿಗೆಲ್ಲಾ ಇಟ್ಟಿಕೊಂಡಿದ್ದನಂತೆ"**

ಕೆಲಸಕ್ಕೆ ಬಾರದ ವ್ಯಕ್ತಿ ತಿರುಕ, ಅಂತಹ ತಿರುಕ ಹೇಗೋ ಮೂರು ಕಾಸು ಹಣವನ್ನು ಸಂಪಾದಿಸಿಕೊಂಡು ಕಿವಿಯ ಬರುಗೆಲ್ಲಾ ಬಚ್ಚಿ ಇಟ್ಟಿದ್ದನಂತೆ. ಸ್ವಲ್ಪ ಸಂಪಾದನೆ ಮಾಡಿ ಕೊಚ್ಚಿಕೊಂಡು ಎಲ್ಲರಿಗೂ ತೋರಿಸುವುದು, ತಾನು ಸಂಪಾದಿಸಿದ್ದೇನೆ ಎಂದು ತೋರಿಸುವುದು ಮನೆಯಲ್ಲಿ ಅಪ್ಪ ಅಮ್ಮ ಹಣ ಕೊಟ್ಟಾಗ ಅದು ನಮ್ಮ ಹತ್ತಿರ ಇದ್ದಾಗ ಅದನ್ನು ಕೇಳಿದಾಗ ಅದು ನಮ್ಮ ಹಣ ಎಂದು ಹೇಳಿದಾಗ ಬಳಸುತ್ತಾರೆ. ಬಚ್ಚಿಟ್ಟ ಹಣಕ್ಕೆ ಈ ಗಾದೆಯನ್ನು ಬಳಸುತ್ತಾರೆ.

**೧೨೬. "ಕದ್ದು ಮಧ್ಯಾಹ್ನಕ್ಕಿಲ್ಲ ಹಿರಿಮಗನ ಹಿಂಡೆ ಕೂಡಿಸಕ್ಕಿಲ್ಲ"**

ಕಳ್ಳತನ ಮಾಡುವುದು ಒಳ್ಳೆಯದಲ್ಲ. ಪರರ ಕ್ಷಣಿಕ ಮಾತ್ರ ಕಳ್ಳತನ ಮಾಡಿದರೆ ಅಂತಹ ಹಣದಿಂದ ಮನೆಯವರಿಗೆಲ್ಲಾ ಕೆಡಕಾಗುತ್ತದೆ. ಕಳ್ಳತನದಿಂದ ಗಳಿಸಿದ ಹಣ ಕ್ಷಣಿಕ ಸುಖ ಕೊಡುತ್ತದೆ. ಆದರೆ ದೀರ್ಘಕಾಲ ಬೆಲೆಬಾಳುವ ಶಾಶ್ವತ ಸಂಪತ್ತಾದ ಮಗನನ್ನು ಕಳೆದುಕೊಳ್ಳಬೇಕಾಗುತ್ತದೆ. ಕಳ್ಳತನ ಮಾಡಿದ ಹಣ ಮಧ್ಯಾಹ್ನದ ಹೊತ್ತಿಗೆ ಇರುವುದಿಲ್ಲ. ಇಂತಹ ಕದ್ದಂತಹ ಹಣದಿಂದ ಹಿರಿಯಮಗನ ಒಟ್ಟುಗೂಡಿಸುವುದಕ್ಕೂ ಇರುವುದಿಲ್ಲ. ಕಳ್ಳತನದಿಂದ ಶಾಶ್ವತ ಸುಖ ಪಡೆಯಲು ಸಾಧ್ಯವಿಲ್ಲ. ಅದು ಸಂಪತ್ತಾಗುವುದಿಂದ ಬೆಲೆಬಾಳುವ ಮಗನನ್ನು ಕಳೆದುಕೊಂಡು ಹಿರಿಯ ಮಗನ ಅಂತಿಮ ಸಂಸ್ಕಾರ ಮಾಡಲು ಹಣವಿಲ್ಲದೆ ಸ್ಥಿತಿಯು ನಿರ್ಮಾಣವಾಗಿದೆ. ಕಷ್ಟಪಟ್ಟು ಕಳ್ಳತನ ಮಾಡುವುದಕ್ಕಿಂತ ಕಷ್ಟಪಟ್ಟು ದುಡಿಯುವುದು ಲೇಸು. ಕೆಟ್ಟದ್ದರ ಪರಿಣಾಮ ಎದುರಿಸುವುದು ಕಷ್ಟ ಸಾಧ್ಯ.

**೧೨೭. "ಬರುಬರುತ್ತಾ ಸೊಸೆಯರ ಪುಣ್ಯ ಹುಟ್ಟು ಹುಟ್ಟುತ್ತಾ ಮಕ್ಕಳ ಪುಣ್ಯ"**

ಮನೆಗೆ ಬರುವ ಸೊಸೆ ಒಳ್ಳಯವಳಾಗಿರಬೇಕು. ಸೊಸೆಯರ ಪಾದಸ್ಪರ್ಶದಿಂದ ಇಡೀ ಸಂಸಾರ ಉದ್ಧಾರ, ವಂಶೋದ್ಧಾರ ಆಗಬೇಕು. ಸೊಸೆಯರ ಪುಣ್ಯದಿಂದ ಇಡೀ ಕೌಟುಂಬಿಕ ಸೌಖ್ಯ ಆಗಬೇಕು ಇಲ್ಲವಾದರೆ ಕೆಡುಕಾದರೆ ಅತ್ತೆಯರಿಂದ ಸೊಸೆಯರು ಅನಿಷ್ಟಕ್ಕೆ ಕೌಟುಂಬಿಕ ಕಲಹಕ್ಕೆ ಕಾರಣಳಾಗುತ್ತಾರೆ. ಮಕ್ಕಳು ಹುಟ್ಟುವಾಗಲು ಅದೃಷ್ಟವಮತರಾಗಿಬೇಕು. ಮಕ್ಕಳು ಮೂಲ ನಕ್ಷತ್ರದವರಾದರೆ ಅಂತಹ ಮಕ್ಕಳಿಂದ ಕೆಡಕಾಗುತ್ತದೆ, ಮಹಾನಕ್ಷತ್ರದವರಾದರೆ ಅಂತಹ ಮಕ್ಕಳಿಂದ ಒಳ್ಳೆಯದಾಗುತ್ತದೆ ಎಂಬುದು ವಾಡಿಕೆ. ಮೂಲತಃ ಸೊಸೆಯರು ಗುಣವತಿಯರಾಗಿ ಹೊಂದಾಣಿಕೆ ಸಾಮರಸ್ಯ, ಉತ್ತಮ ಸ್ವಭಾವದ ಹೆಣ್ಣುಗಳಾಗಿರಬೇಕು. ಹುಟ್ಟುವ ಮಕ್ಕಳು

ಸದಾಚಾರ, ಗುಣಸಂಪನ್ನರಾದ ಮಕ್ಕಳಾಗಿದ್ದರೆ ಉತ್ತಮ ಭವಿಷ್ಯ ಇರುತ್ತದೆ. ಜನ್ಮ ನೀಡಿದ ತಂದೆತಾಯಿಗಳಿಗೆ ಒಳ್ಳೆಯ ಹೆಸರಾಗುತ್ತಾರೆ.

### ೧೨೮. "ನಾನು ನಿನ್ನ ಹಾಗೆ ಕಣೋ ಹುಣ್ಣಿ ಗೊರವ"

ಸಾಕ್ಷಿ ಹೇಳಲು ಹೋದಾಗ ತಪ್ಪು ಮಾಡಿದವರನ್ನು ಬೈಯ್ಯುತ್ತಿರುವ ವ್ಯಕ್ತಿಗಳಿಗೆ ಸಮಾಧಾನ ಮಾಡಿದಾಗ ಈ ಗಾದೆಯನ್ನು ಬಳಸುತ್ತಾರೆ. ,ನಾನು ನಿನ್ನ ಹಾಗೆಯೇ ತಪ್ಪು ಮಾಡಿದವನು ಎಂದು ಸಾಕ್ಷಿ ಹೇಳಲು ಬಂದಿದ್ದಾನೆಂದು ಹೀಯ್ಯಾಳಿಸುತ್ತಾರೆ. ಸಾಕ್ಷಿ ಹೇಳಿ ಸಮಾಧಾನ ಮಾಡಲು ಬಂದ ವ್ಯಕ್ತಿಯನ್ನು ಬಿಡದೆ ಬೈಯುವ ಸಂದರ್ಭದಲ್ಲಿ ಮನುಷ್ಯನ ಕೋಪೋದ್ರೇಕ ಎಷ್ಟು ಇದೆಯೆಂದು ಊಹಿಸಬಹುದು. ಹುಣ್ಣಿ ಗೊರವ ಎಂಬ ಕೀಟವು ಮನುಷ್ಯನನ್ನು ಕಚ್ಚಿದಾಗ ರಕ್ತವನ್ನು ಹೀರುತ್ತದೆ. ಆದರೆ ಅದು ಮೈಗೆ ಕಚ್ಚಿಕೊಂಡಿರುವುದು ಗೊತ್ತಾಗುವುದಿಲ್ಲ. ಅದಕ್ಕೆ ಮನುಷ್ಯನ ಸ್ವಭಾವವನ್ನು ಹೋಲಿಸುವುದು ಅವನು ಹುಣ್ಣಿಯ ತರಹ ಊಸರವಳ್ಳಿ ಬುದ್ಧಿಯವನು ರೂಪಕದ ಮುಖಾಂತರ ಸಾಕ್ಷೀಕರಿಸುತ್ತಾರೆ. ತಪ್ಪನ್ನು ಕಂಡಿಸುವವರಿಗೆ ಬುದ್ಧಿವಾದ ಹೇಳಬೇಕು. ಅದನ್ನು ಬಿಟ್ಟು ತಪ್ಪು ಮಾಡಿದವರ ಪರ ವಹಿಸಬಾರದು. ಹಾಗೆಯೇ ವಹಿಸಿಕೊಂಡರೆ ಸುಮ್ಮನೆ ಅನಾವಶ್ಯಕ ನಿಂದನೆಗೆ ಗುರಿಯಾಗುತ್ತಾರೆ. ಒಳ್ಳೆಯ ಕೆಲಸಗಳಿಗೆ ಪರ ವಹಿಸುವುದು ಸೂಕ್ತ. ಕೆಟ್ಟ ಕೆಲಸಗಳಿಗೆ ಪರ ವಹಿಸಬಾರದು. ಖಂಡಿಸಿ ಸರಿದಾರಿಗೆ ತಂದು ತಿದ್ದುವ ಮನಸ್ಸು ಬಹಳ ಮುಖ್ಯ. ತಪ್ಪು ಮಾಡಿದ ವ್ಯಕ್ತಿಗಳು ತಪ್ಪು ಮಾಡದಂತೆ ನಿಗಾ ವಹಿಸುವುದು. ದಂಡನೆಗಿಂತ ಮಾನಸಿಕ ಪರಿವರ್ತನೆ ಬಹಳ ಮುಖ್ಯ.

### ೧೨೯. "ಅಳುತ್ತಾ ಹೋದ ನಾಯಿ ಮೊಲ ಹಿಡಿಯುತ್ತಾ"

ಯಾವುದೇ ಕಾರ್ಯದ ಯಶಸ್ಸಿಗೆ ಧೈರ್ಯ, ಎದೆಗಾರಿಕೆ, ಕೆಚ್ಚು ಬಹಳ ಮುಖ್ಯ. ಭಯ, ಭೀತಿ, ಅಂಜಿಕೆ ಇವು ಯಾವುದೇ ಯಶಸ್ಸಿಗೆ ಮಾರಕವಾಗುವ ಗುಣಗಳು. ಭಯ, ಭೀತಿ, ಅಂಜಿಕೆಗಳು ಮನುಷ್ಯನನ್ನು ಹಿಂಜರಿಯುವಂತೆ ಮಾಡುತ್ತದೆ. ಸೋಲುತ್ತೇವೆ ಎಂದು ಗೊತ್ತಿದ್ದು ಹಿಂದುಳಿಯುವುದಕ್ಕಿಂತ ಏನಾದರೂ ಆಗಲಿ ಮನ್ನುಗ್ಗುವುದು ತಾನು ಯಶಸ್ಸು ಗಳಿಸುತ್ತೇನೆಂಬ ಅಚಲವಾದ ನಂಬಿಕೆ ಬಹಳ ಮುಖ್ಯ. ಯಾವುದೇ ಕಾರ್ಯ ಸಾಧನೆಗೆ ಧೈರ್ಯ ಎನ್ನುವ ಅಸ್ತ್ರ ಕೈಲಿದ್ದರೆ ಸಾಕು ನಮ್ಮ ಹತ್ತಿರ ಯಾವುದೇ ಪರಿಕರಗಳು ಇಲ್ಲದಿದ್ದರೂ ಯಶಸ್ಸು ಕಟ್ಟಿಟ್ಟ ಬುತ್ತಿ. ಯಶಸ್ಸಿನ ಹಾದಿ ಬಹು ಕಠಿಣ. ಎಡರು ತೊಡರುಗಳ ಸರಮಾಲೆ ಇರುತ್ತದೆ.

ದೇಶದ ಮಹಾನ್ ವ್ಯಕ್ತಿಗಳಾದ ಗಾಂಧೀಜಿ ರಾಷ್ಟ್ರಪಿತ ಎಂಬ ಹೆಗ್ಗಳಿಕೆಗೆ ಪಾತ್ರರಾಗಲು ಅವರು ಮಾಡಿದ ಸ್ವಾತಂತ್ರ್ಯ ಹೋರಾಟ, ಅಹಿಂಸಾವಾದದ ಕಾರ್ಯಾಚರಣೆ ಮಹತ್ತರವಾದದ್ದು. ಭಾರತದ ಸಂವಿಧಾನಶಿಲ್ಪಿ ಎಂಬ ಹೆಗ್ಗಳಿಕೆ ಪಾತ್ರದ ಡಾ. ಬಿ.ಆರ್.ಅಂಬೇಡ್ಕರ್ ಅಸ್ಪೃಶ್ಯತೆಯ ಬೇಗೆಯಲ್ಲಿಯೂ ಕಾರ್ಯಸಾಧನೆ ಮಾಡಿದ್ದಾರೆ. ತಾಂತ್ರಿಕ ಕ್ಷೇತ್ರದ ಸಾಧನೆಗೆ ಸರ್ ಎಂ.ವಿಶ್ವೇಶ್ವರಯ್ಯನವರು ದೀಪದ ಬೆಳಕಿನಲ್ಲಿ ವಿದ್ಯಾಭ್ಯಾಸ ಮಾಡಿ ಅಸಾಧ್ಯ ಪ್ರತಿಭೆಯನ್ನು ಸಾಧಿಸಿತೋರಿಸಿದ್ದಾರೆ. ಈ ಮಹಾನ್ ವ್ಯಕ್ತಿಗಳ ಸಾಧನೆಗೆ ಅವರಲ್ಲಿದ್ದ ಆತ್ಮಬಲವೇ ಕಾರಣವಾಗಿದೆ.

'ಅಳುತ್ತಾ ಹೋದ ನಾಯಿ ಮೊಲ ಹಿಡಿಯುತ್ತಾ' ಎಂಬುದು ಮೊಲ ಹಿಡಿಯಲು ಸಾಧ್ಯವಿಲ್ಲ ಎಂಬುದುನ್ನು ಸೂಚಿಸುತ್ತದೆ. ನಾಯಿ ಮೊಲವನ್ನು ಹಿಡಿಯಲು ಸಾಧ್ಯ ಆದರೆ ನಾಯಿಗೆ ಇರಬೇಕಾದ ಆತ್ಮವಿಶ್ವಾಸ ಇಲ್ಲ. ಆ ವಿಶ್ವಾಸ ನಂಬಿಕೆಯನ್ನು ಬೆಳೆಸಿಕೊಳ್ಳಿ ಎಂಬುದು ಗಮನಾರ್ಹ ಮನುಷ್ಯನ ಸಾಂಸಾರಿಕ ಜೀವನದ ಯಶಸ್ಸಿಗೆ ಇಂತಹ ಆತ್ಮವಿಶ್ವಾಸದ ಅಗತ್ಯವಿದೆ ಎಂಬುದನ್ನು ತಿಳಿಸುತ್ತದೆ.

**೧೩೦. "ಕಂಡವ್ರ ಕಂಬಳಿ ಹೊದ್ದುಕೊಂಡು ಗಂಡನ ಗಮ್ಮಜಲ್ ನೋಡಿ"**

ಹೆಂಡತಿಯು ಗಂಡನಿಗೆ ಮೂದಲಿಕೆ ಮಾತುಗಳಿಂದ ಬೇರೆಯವರ ಹಂಗಿನಲ್ಲಿ ಇದ್ದೀಯ ಎಂಬುದನ್ನು ಮೂತಿಗೆ ತಿವಿಯುವ ರೀತಿ ಮೂದಲಿಕೆಯ ಮಾತುಗಳನ್ನು ಆಡುತ್ತಿದ್ದಾಳೆ. ನಾವು ಇರುವುದು ಬೇರೆಯ ಹಂಗಿನಲ್ಲಿ ಎಂಬುದು ಸ್ಪಷ್ಟ. ನಮಗೆ ಆಶ್ರಯ ದೊರೆತಿರುವುದು. ಅನ್ಯರಿಂದ ಅಂತಹದರಲ್ಲಿ ತನ್ನದೆನ್ನುವ ರೀತಿ ಬಡಾಯಿಕೊಚ್ಚಿಕೊಳ್ಳುವುದು ಸರಿಯಲ್ಲ.

ಗಂಡನಿಗೆ ಹೆಂಡತಿ ಸ್ವಾಭಿಮಾನಿಯಾಗು, ಬೇರೆಯವರ ಹಂಗು ಬೇಡ. ಆ ಹಂಗಿನಲ್ಲಿದ್ದು ಬಡಿವಾರ, ಗತ್ತು ತೋರಿಸುವುದು ತರವಲ್ಲ. ನಮ್ಮತನ ಮುಖ್ಯ ಬೇರೆಯವರ ಆಶ್ರಯ ಬೇಡ ಯೋಗ್ಯವಾದುದಲ್ಲ ಎಂದು ಉದ್ಗರಿಸುತ್ತಾಳೆ.

ಒಂದು ರೀತಿಯ ಮನುಷ್ಯರೆಲ್ಲ ಬೇರೆಯವರ ಹಂಗಿನಿಂದ ಬೆಳೆದುಬಂದಿರುತ್ತಾರೆ. ಸ್ವತಂತ್ರ ವ್ಯಕ್ತಿತ್ವದಿಂದ ಬೆಳೆದು ಬಂದಿದ್ದರೆ ಬಡಾಯಿ ಕೊಚ್ಚಿಕೊಳ್ಳುವುದರಲ್ಲಿ ಅರ್ಥವಿದೆ. ಬೇರೆಯವರ ನೆರಳಿನಲ್ಲಿ ಬೆಳೆದು ತನ್ನದೆಂದು ಬಡಿವಾರ ತೋರಿಸುವುದು ಸಮಂಜಸವಲ್ಲ. ನಮ್ಮದು ಎನ್ನುವಲ್ಲಿ ಸ್ವಂತ ಪರಿಶ್ರಮವಿರಬೇಕು. ಆ ಸಾಧನೆಯಲ್ಲಿ ಮನಸ್ಸಿಗೆ ನೆಮ್ಮದಿ ಇರುತ್ತದೆ. ಆತ್ಮತೃಪ್ತಿ ಇರುತ್ತದೆ.

ಈ ಗಾದೆಯನ್ನು ಇಂದಿನ ಯುವಕರಿಗೆ ಬಹುಮಟ್ಟಿಗೆ ಅನ್ವಯಿಸಬಹುದು. ತಂದೆಯ ಆಶ್ರಯದಲ್ಲಿ ಇದ್ದುಕೊಂಡು ಹುಡುಗಿಯ ಮುಂದೆ ಕಾರು, ಬೈಕಿ ತೋರಿಸಿ

ಬಡಿವಾರ ಕೊಚ್ಚಿಕೊಳ್ಳುತ್ತಾರೆ. ಶೋಕಿ ಜೀವನದಲ್ಲಿ ಹುಡುಗಿಯರನ್ನು ಮೋಹಿಸುವುದು ಹುಡುಗರ ಒಂದು ಚಮತ್ಕಾರದ ಗತ್ತುಗಮ್ಮತ್ತುಗಳಲ್ಲಿ ಕಾಣಬಹುದು.

ಹಳ್ಳಿಯ ಜೀವನ ಸುಮಧುರವಾದುದು. ಆ ಸುಂದರವಾದ ಜೀವನ ಹಾಳಾಗದಂತೆ ಮೌಲ್ಯಯುತವಾಗಿರುವಂತೆ ಪ್ರತಿಯೊಬ್ಬ ಹಳ್ಳಿಗನ ಆಶಯವಾಗಿರುತ್ತದೆ. ತನ್ನದ್ದನ್ನು ಬಿಟ್ಟು ಬೇರೆಯವರ ಹಂಗಿಗೆ ಹೋಗಬಾರದು, ಬೇರೆಯವರಿಗೆ ನೋವುಂಟು ಮಾಡಬಾರದು. ಈ ಗಾದೆಯು ಮನುಷ್ಯನಿಗೆ ಸ್ವತಂತ್ರ್ಯ ವ್ಯಕ್ತಿತ್ವ ಬೆಳೆಸಿಕೊಳ್ಳುವುದು ಉತ್ತಮ. ಅದು ನಿನ್ನ ಸ್ವಸಾಮರ್ಥ್ಯವರಬೇಕೆಂದು ಹೇಳುತ್ತದೆ.

ಒಟ್ಟಿನಲ್ಲಿ ಗಾದೆಗಳು ಜನಪದರ ಶಾಸನಗಳಂತೆ ಕೆಲಸ ನಿರ್ವಹಿಸುತ್ತವೆ. ಮನುಷ್ಯ ನೀತಿವಂತನಾಗಿರಬೇಕು. ಸದಾಚಾರ ಸಂಪನ್ನನಾಗರಬೇಕು, ಶೀಲವಂತ–ನಾಗಿರಬೇಕು. ಉನ್ನತ ಆದರ್ಶ ಗುಣಗಳಿಂದ ಎಲ್ಲರಿಗೂ ಮಾದರಿಯಾಗಿರಬೇಕು ಎಂಬ ಉಪದೇಶಗಳನ್ನು ನೀಡುತ್ತದೆ. ಜನಪದರ ಜೀವನದಲ್ಲಿ ಗಾದೆಗಳು ಕಟ್ಟುಪಾಡುಗಳಾಗಿ ಬಳಕೆಯಾಗುತ್ತವೆ. ಗಾದೆಗಳು ಜೀವನದ ಪ್ರತಿಯೊಂದು ಮಜಲುಗಳಲ್ಲಿಯೂ ಸಂದರ್ಭೋಚಿತವಾಗಿ ಬಳಕೆಯಾಗುತ್ತವೆ. ಗಾದೆಯ ಮೂಲ ಉದ್ದೇಶ "ಬುದ್ಧಿವಂತನಿಗೆ ಮಾತಿನ ಪೆಟ್ಟು ದಡ್ಡನಿಗೆ ದೊಣ್ಣೆಪೆಟ್ಟು"ವಾಗಿದೆ. ಇಲ್ಲಿ ಯಾರಿಗೆ ಯಾರು ದಂಡಿಸಿ ಉಪದೇಶ ಮಾಡುವಂತಿಲ್ಲ. ಮಾತಿನ ಮೂಲಕ ಮನುಷ್ಯ ಸ್ವಭಾವಗಲನ್ನು ತಿದ್ದುವ ತೀಡುವ ಕೆಲಸಮಾಡುತ್ತದೆ.

"ಸಗಣಿ ಜೊತೆ ಸರಸವಾಡುವುದಕ್ಕಿಂತ ಗಂಧದ
ಜೊತೆ ಗುದ್ದಾಡುವುದು ಲೇಸು"

ಗಾದೆಗಳ ಅಂತಿಮ ಉದ್ದೇಶ ಒಳ್ಳೆಯದಾಗಲಿ. ಗಾದೆಗಳು ಸಂದರ್ಭೋಚಿತ–ವಾಗಿ ಬಳಕೆಗೊಂಡು ಮಾರ್ಗದರ್ಶನ ನೀಡುತ್ತವೆ. ಗಾದೆಗಳಲ್ಲಿ ಸಂದರ್ಭ ಸನ್ನಿವೇಶ ಬಹಳ ಮುಖ್ಯ.

## ಅಧ್ಯಾಯ ೫

# ಗಾದೆಗಳ ಮೌಲ್ಯ

ಗಾದೆಗಳ ಮೌಲ್ಯ ಸಾಹಿತ್ಯ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ಗಣನೀಯ ವಿಷಯ. ಜನರ ಜೀವನಾನುಭವದಿಂದ ಮೂಡಿಬಂದ ವಿಶಿಷ್ಟ ಪ್ರಕಾರ ಗಾದೆ. ಇದು ಸಾಹಿತ್ಯ ಮತ್ತು ಸಂಸ್ಕೃತಿಗೆ ಬೆಲೆ ಬಾಳುವ ಕೊಡುಗೆಗಳನ್ನು ನೀಡಿದೆ. ಗಾದೆ ಕಟ್ಟಿಕೊಡುವ ಮೌಲ್ಯಗಳು ಬಹಳ ಮಹತ್ವದ್ದು. ಮೌಲ್ಯವೆಂದರೆ ಒಂದು ವಸ್ತುವಿನ ಮಹತ್ವ, ಬೆಲೆ, 'value' ಆಗಿದೆ. ಗಾದೆಗಳ ಮೌಲ್ಯವೆಂದರೆ ಗಾದೆಗಳ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಮೌಲ್ಯಗಳು ಎಂದು ಹೇಳಬಹುದು.

ಸಂಸ್ಕೃತಿ, ಸಾಹಿತ್ಯ, ಸಮಾಜ, ಭಾಷೆ ಇವುಗಳಲ್ಲಿ ಗಾದೆಯು ಒಂದರೊಳಗೊಂಡು ಅಂತರ್‌ಶಿಸ್ತೀಯವಾಗಿ ಸಮ್ಮಿಳಿತವಾಗಿವೆ. ಸಂಸ್ಕೃತಿಯು ಪರಂಪರಾನುಗತವಾಗಿ ಬಂದ ರೀತಿ ನೀತಿ, ನಡಾವಳಿಗಳಿಗೆ ಸಂಬಂಧಿಸಿದೆ. ಸಾಹಿತ್ಯವು ಜೀವನಾನುಭವದ ಸಾರವಾಗಿದೆ. ಸಮಾಜವು ಮನುಷ್ಯನ ಸಾಮಾಜಿಕ ಸಂಸ್ಥೆಯಾಗದೆ. ಸಮಾಜದ ವ್ಯಕ್ತಿಗಳು ಸಮೃದ್ಧಿ ಜೀವನ ನಡೆಸುವಂತೆ ಪ್ರೇರಣೆ ನೀಡುತ್ತದೆ. ಭಾಷೆಯು ಸಂವಹನದ ಮಾಧ್ಯಮವಾಗುತ್ತದೆ. ಗಾದೆಗಳು ಸಮಾಜ ಜೀವಿಗಳಾದ ಮಾನವ, ಸ್ವರ್ಗ, ನರಕ, ಕಿನ್ನರ–ಕಿಂಪುರುಷ, ಪಕ್ಷಿ ಪ್ರಾಣಿಗಳನ್ನು ಕುರಿತಾಡುತ್ತವಾದರೂ ಇವುಗಳ ಮುಖ್ಯೋದ್ದೇಶ ಜೀವಂತ ಮಾನವನ ಪ್ರಪಂಚದ್ದು. ಮನುಷ್ಯ ಮತ್ತಷ್ಟು ಉತ್ತಮ ಮನುಷ್ಯನಾಗಿ ಬಾಳುವಂತೆ ಮಾಡುವುದು ಗಾದೆಗಳ ಮುಖ್ಯ ಉದ್ದೇಶ. ಆದರ್ಶ ಜೀವನಕ್ಕೆ ಬೇಕಾದ ತಾಳ್ಮೆ, ವಿವೇಕ, ಶ್ರಮ, ಶಿಸ್ತು, ತಪಸ್ಸುಗಳ ತರಬೇತಿ ನೀಡುವುದು ಗಾದೆಗಳ ಬಹುಮುಖ್ಯ ಹೊಣೆಯಾಗಿದೆ. ಮಾನವ ತನ್ನ ಜೀವನದ ಭವಿಷ್ಯವನ್ನು ತೆರೆದ ಕಣ್ಣಿನಿಂದ ಬಿಚ್ಚು ಮನಸ್ಸಿನಿಂದ ನೋಡಲು ಅಗತ್ಯವಾದ ನುಡಿ ದುರ್ಬೀನುಗಳನ್ನು ಒದಗಿಸಿಕೊಡುವುದು ಗಾದೆಗಳ ಧ್ಯೇಯ. ಗಾದೆಗಳ ಪರಮ ಹಾರೈಕೆ ಮನುಷ್ಯ ತನ್ನನ್ನು ತಾನು ಅರಿತುಕೊಂಡು ಆದರ್ಶಪ್ರಾಯನಾಗಿ ಬಾಳುವುದು.

ಆಚಾರಕ್ಕೆ ಅರಸನಾಗು ನೀತಿಗೆ ಪ್ರಭುವಾಗು
ಮಾತಿನಲ್ಲಿ ಚೂಡಾ ಮಣಿಯಾಗು। ನನ ಕಂದ
ಜ್ಯೋತಿಯೇ ಆಗು ಜಗಕೆಲ್ಲಾ.

ಇಂತಹ ತ್ರಿಪದಿಗಳು ಮಾನವನ ನೀತಿ ನಡಾವಳಿ ಸಂಸ್ಕೃತಿಯನ್ನು ಸೂಚಿಸುತ್ತವೆ. ಅಂತಹ ಪರಮಮೌಲ್ಯಗಳು ಗಾದೆಗಳ ಸಾಲಿನಲ್ಲಿ ಎದ್ದುಕಾಣುತ್ತವೆ.

ಸುಪ್ರಸಿದ್ಧ ವಿದ್ವಾಂಸ ಮ್ಯಾಥ್ಯೂ ಆರ್ನಾಲ್ಡನ ಪ್ರಕಾರ "ಪೂರ್ಣತೆಯ ಸಿದ್ಧಿಗಾಗಿ ಮನುಷ್ಯನು ಮಾಡುತ್ತಿರುವ ಪ್ರಯತ್ನವೇ ಸಂಸ್ಕೃತಿ. ಸಂಸ್ಕೃತಿ ಎಂಬುದು ಪ್ರಧಾನವಾಗಿ ಆಂತರಂಗಿಕವಾದ ವಿಕಾಸಕ್ಕೆ ಸಂಬಂಧಸಿದುದು. ಮನುಷ್ಯನ ಮೃಗತ್ವವನ್ನು ಹೋಗಲಾಡಿಸಿ ಅಲ್ಲಿ ನಿಜವಾದ ಮಾನವೀಯತೆಯನ್ನು ಸ್ಥಾಪಿಸುವುದೇ ಸಂಸ್ಕೃತಿ...... ನಮ್ಮನ್ನು ನಾವು ಉತ್ತಮಗೊಳಿಸಿಕೊಳ್ಳಲು ಮಾಡುವ ಪ್ರಯತ್ನವೇ ಸಂಸ್ಕೃತಿ"[೧]

ರೂತ ಬೆನೆಡಿಕ್ಟ್ ಅವರ ಪ್ರಕಾರ, "ಸಂಸ್ಕೃತಿ ಎಂದರೆ ಒಂದು ಸಮಾಜದ ಜೀವನ ವಿಧಾನ, ಅದರ ಆಚಾರ ವ್ಯವಹಾರಗಳು, ಅದರ ಸಂಸ್ಥೆಗಳ ಆಲೋಚನಾ ವಿಧಾನಗಳು. ಪ್ರತಿಯೊಬ್ಬ ವ್ಯಕ್ತಿಯೂ ಪ್ರಪಂಚವನ್ನು ಸ್ವತಂತ್ರವಾಗಿ ನೋಡಲಾರ. ಅವನ ಸಮಾಜದ ಆಲೋಚನಾ ವಿಧಾನಗಳು ಆಚಾರವ್ಯವಹಾರಗಳೂ ಸಂಪ್ರದಾಯಗಳೂ ಅವನ ದೃಷ್ಟಿಯನ್ನು ನಿಯಂತ್ರಿಸುತ್ತವೆ, ಮಾರ್ಪಡಿಸುತ್ತವೆ".[೨] ಹೀಗೆ ಮನುಷ್ಯ ಬಹುಮಟ್ಟಿಗೆ ತಾನು ಹುಟ್ಟಿ ಬೆಳೆದ ಸಂಸ್ಕೃತಿಯ ಶಿಶುವೆಂದು ಹೇಳಬಹುದು"[೩] ಎಂದಿರುವ ಡಾ. ಎಂ. ಚಿದಾನಂದಮೂರ್ತಿಯವರ ಅಭಿಪ್ರಾಯಗಳು ಗಮನಾರ್ಹವಾಗಿವೆ.

ಕನ್ನಡ ಜನತೆ ಆದಿಯಿಂದಲೂ ಸುಸಂಸ್ಕೃತವಾದುದು. ಸೌಜನ್ಯ ಶೌರ್ಯ ಹಾಗೂ ಕ್ಷಮಾಗುಣಗಳನ್ನು ಜನ್ಮತಃ ಪಡೆದುಕೊಂಡು ಬಾಳಿ ಬಂದುದು. ಅದರ ಅನುಭವಾಮೃತದ ಕೆನೆಯಂತಿರುವ ಗಾದೆಗಳಲ್ಲಿ ಸಹಜವಾಗಿಯೇ ಕನ್ನಡ ಜನತೆಯ ಸಂಸ್ಕೃತಿಯ ರೂಪರೇಖೆಗಳು ಕಾಣಸಿಗುತ್ತವೆ. ವಿಪುಲವಾಗಿರುವ ಗಾದೆಗಳ ಪೈಕಿ ಸಂಸ್ಕೃತಿ ಸಂಪನ್ನವಾಗಿರುವ ಕೆಲವು ಗಾದೆಗಳನ್ನು ವಿಶ್ಲೇಷಿಸಬಹುದು.

"ಇಲ್ಲ ಅಂತ ಕೊರಗಬಾರ್ದು ಈತೆ ಅಂತ ಮೆರೆಯಬಾರದು"

ವ್ಯಕ್ತಿಯು ಸಮಚಿತ್ತದಿಂದ ಸಮತೂಕದಿಂದ ಬಾಳ್ವೆ ನಡೆಸಬೇಕೆಂದು ಹೇಳುತ್ತದೆ. ಐಶ್ವರ್ಯ ಅನ್ನುವುದು ಇವತ್ತು ಇರುತ್ತದೆ ನಾಳೆ ಹೋಗುತ್ತದೆ. ಅಥವಾ ಹಣ ನಮ್ಮ ಹತ್ತಿರ ಇರಬಹುದು, ಇಲ್ಲದಿದ್ದರೂ ಹಣದ ಚಾಂಚಲ್ಯವನ್ನು ಅರಿತು ಸಮಸ್ಥಿತಿಯಲ್ಲಿ ಸಮಚಿತ್ತದಲ್ಲಿ ಜೀವನ ನಡೆಸಬೇಕು ಎಂದು ಹೇಳುವ ನಮ್ಮ ಸಂಸ್ಕೃತಿಯ ಅತ್ಯುನ್ನತ ಉಕ್ತಿಯಾಗಿದೆ.

"ಪರರ ವಸ್ತು ಪಾಷಾಣ"

---

೧. ನಂ. ತಪಸ್ವೀಕುಮಾರ್, ಕನ್ನಡ ಗಾದೆಗಳ ಸಮೀಕ್ಷೆ, ಪು. ೯೩.
೨. ನಂ. ತಪಸ್ವೀಕುಮಾರ್, ಕನ್ನಡ ಗಾದೆಗಳ ಸಮೀಕ್ಷೆ, ಪು. ೯೨.
೩. ನಂ. ತಪಸ್ವೀಕುಮಾರ್, ಕನ್ನಡ ಗಾದೆಗಳ ಸಮೀಕ್ಷೆ, ಪು. ೯೨.

ಅನ್ಯರ ವಸ್ತುಗಳಿಗೆ ಆಸೆಪಡಬಾರದು. ಬೇರೆಯವರ ಬಳಿ ಇರುವ ಆಸ್ತಿ, ಆಭರಣ, ಬಟ್ಟೆ ಯಾವುದೇ ಆಗಲಿ ವಿಷಕ್ಕೆ ಸಮಾನ. ಯಾವುದೇ ಮನುಷ್ಯನಾಗಲಿ ಅನ್ಯರ ವಸ್ತುಗಳಿಗೆ ಆಸೆಪಡಬಾರದು ಸಂಸ್ಕೃತಿಯ ದ್ಯೋತಕವಾಗಿದೆ.

"ಕಳ್ಳನ ಹೆಂಡತಿ ಯಾವತ್ತಿದ್ರು ಮುಂಡೆ"

ನಮ್ಮ ಸಂಸ್ಕೃತಿ ಕಳ್ಳತನ ಮಾಡಬಾರದು ಸುಳ್ಳನ್ನು ಹೇಳಬಾರದು ಕೆಟ್ಟ ಕೆಲಸದಿಂದ ಕೆಟ್ಟದಾಗುತ್ತದೆ. ಎಲ್ಲ ಕೆಟ್ಟ ಕೆಲಸಗಳು ಅನರ್ಥಕ್ಕೆ ದಾರಿಮಾಡಿಕೊಡುತ್ತದೆ. ಸನ್ನಡತೆ ಸುಸಂಸ್ಕೃತಿಯನ್ನು ಬೆಳೆಸಿಕೊಳ್ಳಬೇಕು ಎಂದು ಸೂಚಿಸುತ್ತದೆ. ಕೆಟ್ಟ ಕೆಲಸ ಮಾಡುವವರಿಗೆ ಸಾವು ಕಟ್ಟಿಟ್ಟಬುತ್ತಿ. "ಸಗಣಿ ಜೊತೆ ಸರಸವಾಡುವುದಕ್ಕಿಂತ ಗಂಧದ ಜೊತೆ ಗುದ್ದಾಡುವುದು ಲೇಸು". ಅಂದರೆ ಕೆಟ್ಟವರ ಜೊತೆ ಸರಸಸಲ್ಲಾಪ ಆಡುವುದಕ್ಕಿಂತ ಸುಗಂಧಭರಿತವಾದ ಗಂಧದ ಜೊತೆ ಗುದ್ದಾಡುವುದು, ಉತ್ತಮವಾದದ್ದು. ಅಂದರೆ ಒಳ್ಳೆಯವರ ಜೊತೆ ಜಗಳವಾಡುವುದು ಉತ್ತಮ. ಇಂತಹ ಸಾರ್ವಕಾಲೀಕ ಸಂಸ್ಕೃತಿ ಕುರುಹುಗಳನ್ನು ಬಿತ್ತರಿಸುತ್ತಾ ಹೋಗುತ್ತದೆ. ಸಗಣಿಯನ್ನು ಕೆಟ್ಟ ಜನತೆಗೆ ಹೋಲಿಸಿ ಗಂಧವನ್ನು ಒಳ್ಳೆಯ ಜನತೆಗೆ ಹೋಲಿಸಿದ್ದಾರೆ.

ಗಾದೆಯು ಆಚಾರ ಮತ್ತು ಆಚರಣೆ ಸಂಸ್ಕೃತಿಯನ್ನು ಹೇಳುತ್ತವೆ. "ಅಗಸನಿಗೊಂದು ಬಿದ್ದಕಲ್ಲು ಪೂಜಾರಿಗೊಂದು ನಿಂತ್ಕಲ್ಲು". ಅಗಸ ವೃತ್ತಿ ಕಸುಬಿನ ಸಂಸ್ಕೃತಿಯ ಪೂಜಾರಿಯ ಆಚಾರ ಸಂಸ್ಕೃತಿಯನ್ನು ಪ್ರದರ್ಶಿಸುತ್ತವೆ. ಅಗಸ ಎಲ್ಲಿಯಾದರೂ ಹಾಸುವ ಕಲ್ಲನ್ನು ನೋಡಿದರೆ ತನ್ನ ಕುಲಕಸುಬಾದ ಬಟ್ಟೆಯನ್ನು ಹೊಗೆಯುತ್ತಾನೆ. ಅದೇ ತರಹ ಪೂಜಾರಿಯು ಒಂದು ಕಲ್ಲು ಸಿಕ್ಕಿದರೆ ಅದಕ್ಕೆ ಹೂ, ಬಾಳೆಹಣ್ಣು, ಕುಂಕುಮ, ಊದುಬತ್ತಿ ಹಚ್ಚಿ ಪೂಜಿಸುವುದರ ಮೂಲಕ ಧರ್ಮ ಸಂಸ್ಕೃತಿಯನ್ನು ವ್ಯಕ್ತಪಡಿಸುತ್ತದೆ.

"ಅಲ್ಪನಿಗೆ ಐಶ್ವರ್ಯ ಬರುವತ್ತಿಗೆ ಅರ್ಧರಾತ್ರಿಯಲ್ಲಿ ಕೊಡೇ ಇಡಿದರಂತೆ" ಎಂಬ ಜನಪದ ಗಾದೆಯೂ ಒಬ್ಬ ಡಾಂಭಿಕ ಸ್ಥಿತಿವಂತಹ ಕುಸಂಸ್ಕಾರಕ್ಕೆ ಕನ್ನಡಿ ಹಿಡಿಯುತ್ತದೆ ಮತ್ತು ಹಣ ಬಂದಾಗ ವಿಪರೀತವಾಗಿ ಹಿಗ್ಗಿ ಮೆರೆದು, ಹಿಂದುಮುಂದಿನದನ್ನೆಲ್ಲ ಮರೆತು ಬೀಗಬಾರದೆಂಬುದಾಗಿ ವಿವೇಕ ನುಡಿಯುತ್ತದೆ.

'ಜಾತಿಗೆಟ್ಟರು ನೀತಿಗೆಡಬಾರದು' ಮನುಷ್ಯನು ಸನ್ನಡತೆ, ಸದ್ಗುಣ, ಸದಾಚಾರ ಮುಂತಾದ ರೀತಿನೀತಿ ನಡಾವಳಿಗಳನ್ನು ರೂಢಿಸಿಕೊಳ್ಳಬೇಕು. ನಡೆಯ ಸಂಸ್ಕೃತಿಯನ್ನು ತಿಳಿಸುತ್ತದೆ. ಜಾತಿಯನ್ನು ಬಿಟ್ಟರೂ ಪರವಾಗಿಲ್ಲ ನೀತಿಯನ್ನು ಬಿಡಬಾರದು.

ಆದರ್ಶಮಯವಾದ ಸುಖಿಸಂಸಾರ ಜೀವಂತ ಸಮಾಜದ ಸಂಸ್ಕೃತದ ಕುರುಹುಗಳಲ್ಲಿ ಒಂದು. "ಗಂಡಹೆಂಡತಿ ಜಗಳ ಉಂಡು ಮಲಗುವ ತನಕ" ಗಂಡ ಹೆಂಡತಿಯ ನಡುವೆ ಏನೇ ಮನಸ್ತಾಪಗಳಿದ್ದರೂ ಸಾಮರಸ್ಯದಿಂದ ಜೀವನ ನಡೆಸಬೇಕು ಎಂದು ಜೀವನ ಮೌಲ್ಯವನ್ನು ತಿಳಿಸುತ್ತದೆ.

"ರಾಗಿ ಕಲ್ಲಾಡಿದರೆ ನಾಡೆಲ್ಲ ನೆಂಟರಂತೆ ರಾಗಿ ಕಲ್ಲು ಮೂಲೆಗೆ ನಿಂತರೆ ನಂಟನೂ ಇಲ್ಲ ರಾಗಿಕಲ್ಲು ಇಲ್ಲ" ನಂಟರು ತಮ್ಮ ಕುಸಂಸ್ಕೃತಿಯಿಂದ, ಸ್ಥಿತಿವಂತರ ಮನೆ ಮಾತ್ರ ಬರುತ್ತಾರೆ. ಅದೇ ಮನೆಯಲ್ಲಿ ವ್ಯವಹಾರ ನಿಂತಾಗ ಅತ್ತ ಕಡೆ ಮುಖವನೂ ಹಾಕಿ ನೋಡುವುದಿಲ್ಲ.

ಇಂತಹ ಹೀನ ಸಂಸ್ಕೃತಿಯ ನೆಂಟರ ಸಂಸ್ಕಾರವನ್ನು ಗಾದೆಗಳು ತಿಳಿಸುತ್ತದೆ.

"ಅರಮನೆ ಇಲ್ಲದಿದ್ರೂ ಇರಬಹುದು. ಆದರೆ ನೆರೆಮನೆ ಇಲ್ಲದನೇ ಇರಲಿಕ್ಕಾಗಲ್ಲ".

ನೆರೆಹೊರೆಯವರು ಪರಸ್ಪರರ ಜೊತೆ ಸಹಕಾರ ಸಹಬಾಳ್ವೆ, ಕೊಳುಕೊಡುಗೆಯ ಸಂಬಂಧದಿಂದ ಜೀವನ ನಡೆಸಬೇಕು. ತಾನು ಅರಮನೆಯಲ್ಲಿ ಇದ್ದರೂ ನೆರೆಮನೆಯವರ ಸಹಚಾರವಿರಬೇಕು. ಒಬ್ಬ ಮನುಷ್ಯ ಒಂದು ಮನೆಯಲ್ಲಿ ಇರಲು ಸಾಧ್ಯ. ಸ್ನೇಹಸೌಹಾರ್ದ ಜೀವನ ನಡೆಸಬೇಕು ಎಂದು ಹೇಳುತ್ತದೆ. ಶ್ರೀಕೃಷ್ಣ ಕುಚೇಲ ಸಂಬಂಧದ ರೀತಿ ಸ್ನೇಹ ಸೌಹಾರ್ದದಿಂದ ಬಾಳ್ವೆ ನಡೆಸಲು ಆಜ್ಞೆ ಮಾಡುತ್ತವೆ ಗಾದೆಗಳು.

"ಗಾದೆ ಮನುಷ್ಯನಲ್ಲಿಯ ಒಳ್ಳೆಯತನವನ್ನು ಕಾಣುತ್ತದೆ ಮತ್ತು ಈ ಒಳ್ಳೆಯತನದಲ್ಲಿ ಭರವಸೆ ಇರಿಸಿಕೊಂಡಿದೆ" ಎಂಬ ಹೇಳಿಕೆಯಂತೆ "ಒಳ್ಳೆಯ ಗಂಡಾದ್ರೆ ಒಡವೆಯಾಕೆ? ಹೊಸದಾಗಿ ಹಿಟ್ಟು ಆದ್ರೆ ಹೆಸ್ರು ಯಾಕೆ?" ಒಂದು ಹೆಣ್ಣಿಗೆ ಒಳ್ಳೆಯ ಗಂಡ ಸಿಕ್ಕಿದರೆ ಅವಳಿಗೆ ಬಂಗಾರ, ಚಿನ್ನದ ಆಭರಣಗಳು ಮುತಿನಂತಹ ಗಂಡನ ಮುಂದೆ ತೃಣಕ್ಕೆ ಸಮಾನ. ಹೊಸದಾಗಿ ಬೆಳೆದಂತಹ ರಾಗಿಯ ಮುದ್ದೆ ಆದರೆ ಸಾಂಬಾರ ಬೇಡ. ಅಂದರೆ ಒಂದು ಒಳ್ಳೆಯ ವಸ್ತು, ವ್ಯಕ್ತಿ, ಒಳ್ಳೆಯದಕ್ಕೆ ಮನುಷ್ಯನು ಸದಾ ಸ್ವೀಕರಿಸುವ ಮನೋಭಾವನೆಯನ್ನು ಉಳ್ಳವರು.

'ತಾಳಿದೋನು ಬಾಳಿಯಾನು', 'ಈಸಬೇಕು ಇದ್ದು ಜಯಿಸಬೇಕು', 'ದಾನದಲ್ಲಿ ಧರ್ಮರಾಯನಾಗಿರಬೇಕು', 'ಗುಣನೋಡಿ ಹೆಣ್ಣು ತಗಬಾ', 'ಮನೆನೋಡಿ ಹೆಣ್ಣು ಕೊಡು', 'ಸದಾ ಹಸನ್ಮುಖಿಯಾಗಿರು' ಇಂತಹ ಹತ್ತು ಹಲವಾರು ಗಾದೆಗಳು ಜೀವನ ಹತ್ತು ಹಲವು ಮುಖಗಳನ್ನು ಪರಿಚಯಿಸುತ್ತದೆ.

ಉತ್ತಮ ಆದರ್ಶಗಳನ್ನುಳ್ಳ ಮನುಷ್ಯ ಸತ್ಯಮಾರ್ಗದಲ್ಲಿ ಚೆನ್ನಾಗಿ ದುಡಿಯಬೇಕು; ಸನ್ಮಾರ್ಗ ಹಿಡಿದು ನಡೆಯಬೇಕು. ತಾನೂ ಸುಖಿಯಾಗಿರಬೇಕು; ಅನ್ಯರಿಗೂ ಉಪಕಾರಿಯಾಗಿರಬೇಕು. ಅಂಥವನನ್ನು ಜಗತ್ತೂ ಮೆಚ್ಚುತ್ತದೆ. ದೇವತೆಗಳೂ ಮೆಚ್ಚುತ್ತಾರೆ. ಆತನ ಜನ್ಮ ಸಾರ್ಥಕವಾಗುತ್ತದೆ. ಹಾಗಿಲ್ಲದೆ ಅತಿ ಜಿಪುಣನಾಗಿ, ಅನ್ಯರ ಅಲ್ಪಕಷ್ಟಗಳಿಗೂ ತಕ್ಕಂಥ ಉಪಕಾರ ಮಾಡದಿರುವವನು ಲೋಕದ ದೃಷ್ಟಿಗೆ ಕನಿಷ್ಠನಾಗಿ ಕೇವಲ ಪ್ರಾಣಿ ಮಾತ್ರನಾಗಿ ತೋರುವುದು ಸಹಜ. ಇಂಥ ಸ್ವಭಾವದವನನ್ನು ಲೇವಡಿ ಮಾಡಿರುವ ರೀತಿ ವಿನೂತನವಾಗಿದೆ.

'ಶರಣರ ಗುಣ ಮರಣದಲ್ಲಿ ಕಾಣು' ಎಂಬ ಗ್ರಾಂಥಿಕ ಗಾದೆಯ ಸೊಗಸು, ಸಾರ್ಥಕತೆ ವಿಖ್ಯಾತವಾಗಿದೆ. ಶೆಟ್ಟಿಯ ಬಂಡವಾಳ ಸತ್ತಮೇಲೆ ಗೊತ್ತಾಗುವಂತೆ ದಿಟವಾದ ಶರಣರಾದವರ ಗುಣಗಳು ಅವರ ಮರಣಾನಂತರ ಬೆಳಕಿಗೆ ಬರುತ್ತದೆ. ಶರಣರು ಸತ್ಪುರುಷರು ಬದುಕಿರುವಾಗ ತೀರ ಅಲೌಕಿಕವಾಗಿ ಕಾಣಿಸಿಕೊಳ್ಳುತ್ತಾರೆ. ಲೋಕದ ಕಣ್ಣಿಗೆ ತೀರ ವಿಚಿತ್ರವಾಗಿ ಹುಚ್ಚರಾಗಿ ಕಾಣುತ್ತಾರೆ. ಆದರೆ ಅವರು ಸದುದ್ದೇಶಗಳನ್ನಿರಿಸಿಕೊಂಡೇ ಬಾಳಿ ಬಂದಿರುತ್ತಾರೆಂಬುದು ಅವರು ಬದುಕಿರುವಾಗ ತಿಳಿಯುವುದಿಲ್ಲ. ಅಂಥ ಮಹಾತ್ಮರು ಸತ್ತಾಗ ದಿಟವಾದ ಸತ್ವ ಬೆಳಕಿಗೆ ಬರುತ್ತದೆ. ಅವರು ದಿಟಕ್ಕೂ ಮಹಾತ್ಮರೆಂದು ಅರಿವಾಗುತ್ತದೆ.

ಆದ್ದರಿಂದ ಒಬ್ಬ ವ್ಯಕ್ತಿ ಸತ್ತಮೇಲೂ ಆತನ ಕೀರ್ತಿ ಚಿರಸ್ಥಾಯಿಯಾಗಿ ಇರುವಂತೆ ಆದರ್ಶಪ್ರಾಯವಾಗಿ, ಉತ್ತಮವಾಗಿ ಬಾಳಬೇಕೆಂದು ಈ ನುಡಿ ಕರೆ ನೀಡುತ್ತದೆ. ಇದು ಉತ್ತಮ ಸಂಸ್ಕೃತಿಯುಳ್ಳವರ ಮಹದಾಕಾಂಕ್ಷೆ ಅದಿಲ್ಲದವರ ಬಂಡವಾಳವೆಲ್ಲ ಬದುಕಿರುವಾಗಲೇ ಬೆಳಕಿಗೆ ಬಂದುಬಿಡುತ್ತದೆ. ಸತ್ತಮೇಲಂತೂ ಮತ್ತಷ್ಟು ಹುಳುಕುಗಳು ಮೇಲೆದ್ದು ತೇಲಾಡತೊಡಗುತ್ತವೆ. ಶರಣರಾದವರು ಸುಸಂಸ್ಕೃತರು. ಮರಣಕಾಲದಲ್ಲಿ ಧೀರರಾಗಿರುತ್ತಾರೆ. ಮರಣವೇ ಮಹಾನವಮಿ ಎಂದು ಹಿಗ್ಗಿನಿಂದ ಹೆಮ್ಮೆಯಿಂದ ಸಾಯುತ್ತಾರೆ. ಅವರಿಗೆ ಸತ್ತಮೇಲೆ ಜನ ಏನೆಂದಾರು? ಎಂಬ ಅಳುಕಿಲ್ಲ. ಹೀಗೆ ಈ ನುಡಿಯ ಭಾವ ನೂರ್ಮಡಿಸುತ್ತ ನಡೆಯುತ್ತದೆ. ಆದ್ದರಿಂದಲೇ ದಾಸರು 'ಮಾನವ ಜನ್ಮ ಬಲು ದೊಡ್ಡದು. ಅದ ಹಾಳುಮಾಡಿ ಕೊಳ್ಳಬೇಡಿ ಹುಚ್ಚಪ್ಪಗಳಿರಾ' ಎಂಬುದಾಗ ಹಾಡಿ ಕರೆಯಿತ್ತರು. ಎಂಥ ಸುಸಂಸ್ಕೃತ ಪರಂಪರೆ ಕನ್ನಡಿಗರದು.

ಸುಸಂಸ್ಕೃತರು ಒಳ್ಳೆಯವರ ಗೆಳೆತನಕ್ಕೆ ಬಹಳ ಮಹತ್ವದ ಸ್ಥಾನವಿದೆ. ಕೆಟ್ಟ ಜನರ ಸಹವಾಸ ಮಾಡಿದರೆ ಕೆಟ್ಟದಾಗುತ್ತದೆ. 'ಸಂಗದಿಂದ ಸನ್ಯಾಸಿ ಕೆಟ್ಟ'

ಎಂದಾಗುತ್ತದೆ. ನಮ್ಮ ಜನಪದರ ಒಂದು ಜನಪದಗೀತೆಯು ಬಹಳ ಅರ್ಥಪೂರ್ಣ-ವಾಗಿದೆ.

"ಒಳ್ಳೆಯರ ಗೆಳೆತನ ಕಲ್ಲು ಸಕ್ಕರೆ
ಯಾಂಗ । ಕುಲ್ಲರ ಗೆಳೆತನ ಮಾಡಿದರೆ ನನ
ಕಂದ ಸಲ್ಲಾದ ಮಾತು ಬರುತಾವ ।"

ಇಲ್ಲಿ ಒಂದು ಸಾಲು ಒಂದೊಂದು ಗಾದೆಯಾಗಿ ಮೂಡಿಬಂದಿದೆ. ಒಂದೊಂದು ಸಾಲಿನ ಅರ್ಥ ಮಹತ್ವದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ.

ಗಾದೆಗಳು ಒಡಮೂಡಿಸಿಕೊಂಡಿರುವ ಐತಿಹಾಸಿಕ, ಪೌರಾಣಿಕ ಹಾಗೂ ಐತಿಹ್ಯಿಕ ಸಂಗತಿಗಳ ಸ್ಥೂಲ ಪರಿಚಯ ಮಾಡಿಕೊಳ್ಳಬಹುದು.

"ಬುಕ್ಕರಾಯ ಮೆಚ್ಚಿ ಬೆಕ್ಕಿನ ಮರಿಯಿತ್ತು" ಎಂಬ ಗಾದೆ ವಿಜಯನಗರ ಸಾಮ್ರಾಜ್ಯ ಸಂಸ್ಥಾಪಕನಾದ ಬುಕ್ಕರಾಜನನ್ನು ಕುರಿತು ಹುಟ್ಟಿದ್ದಿರಬೇಕು. ಹೀಗೆಯೇ 'ಕೃಷ್ಣರಾಜ ಭೂಪ, ಮನೆಯೆಲ್ಲ ದೀಪ' ಎಂಬ ಗಾದೆ ಮಹಾರಾಜ ಶ್ರೀ ಕೃಷ್ಣದೇವರಾಜನ ಆಳ್ವಿಕೆಯಲ್ಲಿ ಸಿರಿ ಸಂಪತ್ತುಗಳನ್ನೊಳಗೊಂಡು ಸಮೃದ್ಧಿ, ಸಂತೋಷಗಳ ಸಾಗರವಾಗಿದ್ದ ವಿಜಯನಗರ ಸಾಮ್ರಾಜ್ಯದ ಮಹೋನ್ನತಿಕೆಯನ್ನು ಸಾರುತ್ತದೆ.

ಪುರಾಣ ಪುಣ್ಯಕಥೆಗಳಿಂದ ತಮ್ಮ ಜೀವನವನ್ನು ರೂಪಿಸಿಕೊಳ್ಳಲು ಸದಾ ತವಕಸುತ್ತಿರುವ ಕನ್ನಡಿಗರು ಅನೇಕ ಪೌರಾಣಿಕ ಗಾದೆಗಳನ್ನೂ ಸೃಷ್ಟಿಮಾಡಿದ್ದಾರೆ. 'ಅಳಿಲು ಸೇವೆ ಮಳಲ ಭಕ್ತಿ' ಎಂಬ ಗಾದೆ ರಾಮಾಯಣದ ಕಥೆಯನ್ನು ನೆನಪಿಗೆ ತರುತ್ತದೆ. ಶ್ರದ್ಧೆಯಿಂದ ಮಾಡಿದ ಅಲ್ಪ ಸೇವೆಯೂ ಸಾರ್ಥಕತೆ ಪಡೆಯುತ್ತದೆಂಬುದು ಈ ಗಾದೆಯ ಸಂದೇಶ. ಶ್ರದ್ಧಾಭಕ್ತಿಯಿಂದ ಅರ್ಪಿಸಿದ ಒಂದು ಹೂವಿನೆಸಳಿನಿಂದಲೇ ಸಂತೃಪ್ತಿ ಹೊಂದುತ್ತೇನೆಂದು ಭಗವಂತ ಹೇಳಿದನೆಂಬುದಾಗಿ ಭಗವದ್ಗೀತೆ ಸಾರುತ್ತದೆ. ರಾಮಾಯಣವನ್ನು ಕುರಿತ ಮತ್ತೊಂದು ಗಾದೆ 'ಅಂಕೆಯಿಲ್ಲದ ಕಪಿ ಲಂಕೆ ಸುಟ್ಟಿತು' ಎಂದು ಸೂಚಿಸುತ್ತದೆ. 'ಒಲದಲ್ಲಿ ವಾಲಿ, ಛಲದಲ್ಲಿ ರಾಮ' ಎಂಬುದು ಆ ವೀರರ ವಿಶಿಷ್ಟಗುಣವನ್ನು ತೋರುತ್ತದೆ. 'ಹೆಣ್ಣಿನಿಂದ ರಾವಣ ಕೆಟ್ಟ, ಮಣ್ಣಿನಿಂದ ಕೌರವ ಕೆಟ್ಟ' ಎಂಬ ಗಾದೆ ರಾಮಾಯಣ ಮಹಾಭಾರತ ಕಥೆಗಳ ಮೂಲಸೂತ್ರವನ್ನು ಒಂದೇ ಮಾತಿನಲ್ಲಿ ಕಟ್ಟರಿಸಿದಂತೆ ಹೇಳುತ್ತದೆ. 'ಅಂತೂ ಇಂತೂ ಕುಂತೀ ಮಕ್ಕಿಗೆ ರಾಜ್ಯವಿಲ್ಲ' ಎಂಬ ಗಾದೆಯು ಮನನೀಯ.

ಅನೇಕ ಸ್ಥಳನಾಮ ವಿಶೇಷಗಳನ್ನು ಕುರಿತಾಗಿಯೂ ಸ್ವಾರಸ್ಯಕರ ಗಾದೆಗಳು ಹುಟ್ಟಿಕೊಂಡಿವೆ. 'ಮೇಲುಕೋಟೆ ಜಾತ್ರೇಲಿ ಬೋಳು ದಾಸಯ್ಯನನ್ನ ಕಂಡ್ರ ಅಂದಂತೆ' ಎಂಬ ಗಾದೆ ನಗೆ ಉಕ್ಕಿಸುತ್ತದೆ. ಏಕೆಂದರೆ ಆ ಜಾತ್ರೆಗೆ ಬರುವವರೆಲ್ಲ ಬೋಳುದಾಸಯ್ಯಗಳಂತೆ. 'ಮಲಯಾಳಕ್ಕೆ ಹೋಗಿ ಮೂಗೀ ತಂದರು' ಎಂಬ ಗಾದೆ ಮಲೆಯಾಳದ ಸ್ತ್ರೀ ಸೌಂದರ್ಯವನ್ನೂ ಅಂಥ ಕಡೆಯೂ ಬಯಸಿ ಮೂಗಿಯನ್ನು ತಂದವರ ಮಂಕುತನವನ್ನೂ ಸೂಚಿಸಿ ನಗೆಗೀಡುಮಾಡುತ್ತದೆ.

ಹೀಗೆ ಗಾದೆಗಳು ಮನುಷ್ಯನನ್ನು ತಪ್ಪುದಾರಿಗೆ ಹೋಗದಂತೆ ಒಳ್ಳೆಯ ಸನ್ಮಾರ್ಗದಲ್ಲಿ ನಡೆಯುವಂತೆ ಸೂಚಿಸುತ್ತದೆ. ಸಂಸ್ಕೃತಿಯು ಪರಂಪರಾನುಗತವಾಗಿ ಬಂದ ರೀತಿನೀತಿಗಳು, ಪದ್ಧತಿ ಪರಂಪರೆಗಳು, ಆಚಾರವಿಚಾರಗಳನ್ನು ಪ್ರತಿಬಿಂಬಿಸುತ್ತದೆ. ಇವು ಸದಾಕಾಲ ಉಳಿಯುವಂತೆ ಗಾದೆಗಳ ಮೂಲಕ ಎಚ್ಚರಿಸುತ್ತದೆ.

ಗಾದೆಯು ಜೀವನಾನುಭವದ ನಾಣ್ನುಡಿಯಾಗಿದೆ. ಸಾಹಿತ್ಯವು ರಸಾನುಭವ ಮತ್ತು ಜೀವನಾನುಭವ ಮತ್ತು ಸಾಹಿತ್ಯ ರೂಪಗಳನ್ನು ಒಳಗೊಂಡಿದೆ. ಗಾದೆಗಳು ಕಾವ್ಯ ಲಕ್ಷಣ ಅದರೊಡನೆ ಅನಿವಾರ್ಯವಾಗಿ ಸೇರಿಬರುತ್ತದೆ. ಉಪಮೆ, ದೃಷ್ಟಾಂತ, ಉತ್ಪ್ರೇಕ್ಷೆ, ವಿವಿಧ ರೀತಿಯ ಪ್ರಾಸಗಳು, ಅರ್ಥ ವೈಪರೀತ್ಯ (ವಿರೋಧಾಲಂಕಾರ) ಮೊನೆ ಇತ್ಯಾದಿ ಸಾಹಿತ್ಯಿಕ ಮೌಲ್ಯಗಳನ್ನು ಗಾದೆಗಳನ್ನು ನೋಡಬಹುದು.

ಗಾದೆಗಳು ಪಂಡಿತ ಪಾಮರರೆಂಬ ಭೇದವಿಲ್ಲದೆ ಲೋಕದಾದ್ಯಂತ ಬಳಕೆಯಲ್ಲಿರುವ ಸಂಗತಿಯಾಗಿದೆ. ಪ್ರತಿಯೊಂದು ಭಾಷೆಯ ಮಹಾಕವಿಯೂ ಇತರ ಕವಿಗಳೂ ಪ್ರಚಲಿತ ಗಾದೆಗಳನ್ನು ಬಳಸಿಕೊಂಡಿದ್ದಾರೆ; ಅಥವಾ ತಾವೆ ಅಂಥ ನುಡಿಗಳನ್ನು ಸೃಷ್ಟಿಸಿ ಚಲಾಯಿಸಿದ್ದಾರೆ. ಲೋಕದ ತತ್ವಜ್ಞಾನಿಗಳೂ ಹೀಗೆಯೇ. ಪಾಮರ ಸಾಹಿತ್ಯವೆನ್ನಲಾದ ಜನಪದ ಸಾಹಿತ್ಯದಲ್ಲೂ ಗಾದೆಗಳು ಹೇರಳವಾಗಿ ಕಾಣಸಿಗುತ್ತವೆ. ಜನಪದ ಸಮಾಜದಲ್ಲಿ ಇವೊತ್ತಿಗೂ ನೂರಾರು ಸಾಹಿತ್ಯಿಕಗುಣ, ಸ್ವಂತಿಕೆ, ಕಸುವು, ಚೆಲುವು, ಸಂಸ್ಕೃತಿಗಳನ್ನು ಕಂಡು ಆಧುನಿಕ ವಿದ್ವಾಂಸರೂ ಮೆಚ್ಚಿ ಮಾನ್ಯತೆ ನೀಡಿದ್ದಾರೆ.

ನಾಗರಿಕವಾದ ಶಿಷ್ಟ ಸಾಹಿತ್ಯ ಪ್ರಪಂಚದಲ್ಲಿ ಗಾದೆಗಳು ಬಳಕೆಗೊಂಡಿವೆ–ಯೆಂದರೂ ಅಲ್ಲಿ ಅವುಗಳ ಸ್ಥಾನಮಾನ ಗೌಣ. ಪ್ರಾಸ್ತಾವಿಕವಾಗಿಯಷ್ಟೆ ಗಾದೆಗಳು ಬರುತ್ತವೆ; ಉಪಮೆ ರೂಪಕಾದಿ ಅಲಂಕಾರಗಳಾಗಿ ಕಾರ್ಯನಿರ್ವಹಿಸುತ್ತವೆ. ಆದರೆ ಜನಪದ ಸಾಹಿತ್ಯದಲ್ಲಿ ಗಾದೆಗಳಿಗೆ ಪರಮ ಪ್ರಾಶಸ್ತ್ಯವಿದೆ. ಏಕೆಂದರೆ ಗಾದೆಗಳು

ಜಾನಪದರ ಬಾಳುಸಿರು. ಕೆಲವರಂತೂ ಅವಿಲ್ಲದೆ ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳುವುದು ಸಾಧ್ಯವೇ ಇಲ್ಲವೆಂಬಷ್ಟರ ಮಟ್ಟಿಗೆ ಗಾದೆಗಳಿಗೆ ಅಂಟಿಕೊಂಡಿದ್ದಾರೆ. ಅಂಥವರು ಎಲ್ಲ ಸಂದರ್ಭಗಳಿಗೂ ಸೂಕ್ತವಾದ ಗಾದೆ ಬಾಣಗಳನ್ನು ಸಿಡಿಸಿ, ತಮ್ಮ ಲೋಕಾನುಭವ ಹಾಗೂ ಸಾಮಯಿಕ ಪ್ರಜ್ಞೆ, ಮತಿವಂತಿಕೆಗಳನ್ನು ತೋರ್ಪಡಿಸುತ್ತಾರೆ. ಮಿಗಿಲಾಗಿ ಜನಪದ ಸಾಹಿತ್ಯದ ಬಹುಮುಖ್ಯ ಪ್ರಕಾರವಾಗಿ ಗಾದೆಗಳು ಮನ್ನಣೆ ಪಡೆದಿವೆ. ಪ್ರತಿಯೊಂದು ಶುದ್ಧ ಗಾದೆಯಲ್ಲೂ ಸಾಹಿತ್ಯದ ಎಳೆಯೊಂದು ಮಿಂಚುತ್ತದೆ. ಆದರೆ ಎಲ್ಲವೂ ಸಾಹಿತ್ಯಿಕಾಂಶಗಳನ್ನು ಹೊಂದಿರಬೇಕಾಗಿಲ್ಲ. ಕಾರಣ ಗಾದೆಗಳು ಕೇವಲ ಸಾಹಿತ್ಯ ಕುಸುಮಗಳಾಗಿಯಷ್ಟೆ ಹುಟ್ಟಲಿಲ್ಲ. ಅವುಗಳಲ್ಲಿ ನೀತಿ ಇದೆ. ತತ್ವಜ್ಞಾನವಿದೆ, ಐತಿಹಾಸಿಕ, ಪೌರಾಣಿಕ, ಸಾಂಸ್ಕೃತಿಕ ಮೌಲ್ಯವಿದೆ. ಇವೆಲ್ಲ ಗುಣಮೌಲ್ಯಗಳನ್ನೂ ಪಡೆದುಕೊಂಡಿರುವ ಕೆಲವು ಗಾದೆಗಳು ಸಿಗುತ್ತವೆ. ಪ್ರತಿಯೊಂದು ಗಾದೆಯೂ ಒಂದಿಲ್ಲೊಂದು ಮುಖ್ಯಾಂಶವನ್ನೊಳಗೊಂಡೇ ಇರುತ್ತದೆ. ಹಾಗಿಲ್ಲದಿರುವ ನುಡಿ ಗಾದೆ ಎನ್ನಿಸಿಕೊಂಡು ಬಹುಕಾಲ ಬಾಳಲಾರದೆಂಬುದು ಖಚಿತ.

"ಪ್ರಾಸವಿಲ್ಲದ ಪದವ ತಾಸು ಆಡಿದರೇನು" ಎಂಬ ಉಕ್ತಿಯಂತೆ ಗಾದೆಗಳು ಪ್ರಾಸದಿಂದ ಕೂಡಿವೆ.

"ಸೋರ ಮನೆಬೇಡ
ಹೋರಾಡದೆ ಇರುವ ಗಂಡ ಬೇಡ"

ಸ್ತ್ರೀ ಸಹಜವಾದ ಬಯಕೆಗಳು ಇಲ್ಲಿ ಎದ್ದು ಕಾಣುತ್ತವೆ. ಹೆಣ್ಣು ತನ್ನ ಗಂಡ ಧೈರ್ಯವಂತ ಮತ್ತು ಬಲಶಾಲಿಯಾಗಿರಬೇಕು ಎನ್ನುವ ಸಂದರ್ಭದಲ್ಲಿ ಈ ಗಾದೆಯನ್ನು ಬಳಸುತ್ತಾರೆ. ಹೆಂಬೇಡಿಯಾಗಿರುವ ಗಂಡಬೇಡ ಗಂಡ ಛಲವಾದಿಯಾಗಿರಬೇಕು ಇಲ್ಲವಾದರೆ ಸಂಸಾರ ಜವಾಬ್ದಾರಿ ಕಷ್ಟ ಎಂಬುದನ್ನು ಹೇಳುತ್ತದೆ. ಗಂಡ ಜವಾಬ್ದಾರಿ ಮನುಷ್ಯನಾಗಿದ್ದರೆ ಸೋರುವ ಮನೆಯನ್ನು ರಿಪೇರಿ ಮಾಡುತ್ತಿದ್ದರು. ಆದರೆ ಗಂಡನು ಅದರ ಬಗ್ಗೆ ತಲೆಗೆಡಿಸಿಕೊಳ್ಳುವುದಿಲ್ಲ. ಗಂಡನು ತನ್ನ ಸಂಸಾರಕ್ಕೆ ಜೀವವಹಿಸುವವನಾಗಬೇಕು. ಸಂಸಾರದ ನೌಕೆಯನ್ನು ನಡೆಸಲು ಸಮರ್ಥನಲ್ಲದಿರುವ ಗಂಡ ಬೇಡ ಎಂಬುವುದನ್ನು ಹೇಳುತ್ತದೆ. ಸೋರಮನೆ, ಹೋರಾಡದಿರುವ ಗಂಡ ಎರಡು ಒಂದೇ. ಜೀವನ ನಡೆಸುವುದು ಕಷ್ಟ. ಈ ಗಾದೆಯಲ್ಲಿ ಸಾಹಿತ್ಯಿಕ ಕಾವ್ಯಲಕ್ಷಣವಾದ ಅಂತ್ಯಪ್ರಾಸ ಬಳಕೆಯಾಗಿದೆ.

"ಆ ಮಳ್ಳಿ ಈ ಮಳ್ಳಿ ಯಾರು ಕರದ್ರು ಹೋಗ ಮಳ್ಳಿ"

ಕರೆದರೂ ಬರದಿರುವ ಸಂದರ್ಭದಲ್ಲಿ ಬಳಸುತ್ತಾರೆ.

ಮಳ್ಳಿ ಎಂದರೆ ಒಳಗೆ ಲೆಕ್ಕಾಚಾರ ಹಾಕುವ ಬುದ್ಧಿಯವರು. ಬಾ ಇಲ್ಲಿ ಅಂತಹ ಕರೆದರೆ ಅದು ಇದು ಎಂದು ನೆವಗಳನ್ನು ಹೇಳಿ ಬರುವುದಿಲ್ಲ ಎಂದು ಹೇಳುತ್ತಾರೆ. ಆ ಸಂದರ್ಭ ಈ ಮಾತು ಒಳಗೊಂಡಿದೆ. ಆಗ ಕರೆಯುವವರು ಕರೆದಿಲ್ಲವೆಂದು ತಿರಸ್ಕಾರವನ್ನು ಹೇಳುತ್ತಾರೆ. ಅದು ಇದು ಕೆಲಸವಿದೆ ಎಂದು ಸುಳ್ಳು ಹೇಳುವ ಪರಿಪಾಠವಿದೆ. ಅಕ್ಷರಗಳ ಆವೃತ್ತಿಯೇ ಅನುಪ್ರಾಸ. ಈ ಅನುಪ್ರಾಸದಲ್ಲಿ ಒಂದೋ ಎರಡೋ ಮೂರೋ ಅಕ್ಷರಗಳು ಮತ್ತೆ ಮತ್ತೆ ಬಂದರೆ ಅದನ್ನು 'ವೃತ್ಯನುಪ್ರಾಸ'. ಇಂತಹ ಪ್ರಾಸ ಈ ಗಾದೆಯಲ್ಲಿ ಬಳಕೆಯಾಗಿದೆ. 'ಮಳ್ಳಿ' ಅಕ್ಷರವು ಪುನಃ ಪುನಃ ಆವೃತವಾಗಿರುವುದನ್ನು ಕಾಣಬಹುದು.

"ಆಡವೆರಡು ಆಡು ಹೋದ ಹಾಗೆ ನೋಡವೆರಡು
ಕಣ್ಣು ಹೋದ ಹಾಗೆ"

ಮನುಷ್ಯನ ಜೀವ ಮರೀಚಿಕೆಯಂತೆ ನೋಡು ನೋಡುತ್ತಿದ್ದಂತೆ ಮರೆಯಾಗುತ್ತವೆ ಎಂದು ಸೂಚಿಸುತ್ತದೆ. ಮನುಷ್ಯ ವಾಸ್ತವ ಪ್ರಪಂಚದಲ್ಲಿ ಇದ್ದಾಗ ಆಡಿನ ರೀತಿ ಲವಲವಿಕೆಯಿಂದ ಇದ್ದನು. ಆಡುಆಟ ಆಡುವ ರೀತಿ ಮನುಷ್ಯ ಎದುರಿಗೆ ಇದ್ದ ಜೀವ ನೋಡುನೋಡುತ್ತಿದ್ದಂತೆ ಕಣ್ಮರೆ ಆಗುವ ಪರಿಯನ್ನು ಸೂಚಿಸುತ್ತದೆ. ಮನುಷ್ಯನ ಜೀವ ಬೆಲೆಯುಳ್ಳದ್ದು ಅಂತಹ ಬೆಲೆ ಬಾಳುವ ಜೀವ ಹೋಯಿತು ಎನ್ನುವ ಅರ್ಥ ಸೂಕ್ಷ್ಮವಾಗ ಹೊಳೆಯುತ್ತದೆ. ಎದುರಿಗಿದ್ದ ಜೀವ ಮನುಷ್ಯನದ್ದು ಅದು ಆಕಸ್ಮಿಕ ಎಂಬ ಸತ್ಯವನ್ನು ಸಾರುತ್ತವೆ. ಇಲ್ಲಿ ಅಕ್ಷರಗಳು ಮತ್ತೆ ಮತ್ತೆ ಒಂದಿರುವುದನ್ನು ಕಾಣಬಹುದು.

"ಪಕ್ಕದ ತಟ್ಟೆಯಲ್ಲಿ ನೊಣ ಬಿದ್ದುದು ನೋಡಿ
ನಗುತ್ತಿದ್ನಂತೆ ಅವನ ತಟ್ಟೆಯಲ್ಲಿ ಹೆಗ್ಗಣಾನೇ ಸತ್ತಿತಂತೆ"

ಇನ್ನೊಬ್ಬರ ಕಷ್ಟವನ್ನು, ಸ್ಥಿತಿಯನ್ನು ನೋಡಿ ನಗಾಡುವುದು ಸರಿಯಲ್ಲ. ತನಗೆ ಆ ಸ್ಥಿತಿ ಒದಗಿದಾಗ ಅದು ಇನ್ನೊಬ್ಬರಿಗಿಂತ ಘನಘೋರವಾಗಿರುತ್ತದೆ. ಬೇರೆಯವರಿಗೆ ಕಷ್ಟಬಂದಿದೆ ಎಂದರೆ ಅದಕ್ಕೆ ಪರಿಯಾಗಿ ಮರುಗಬೇಕು, ಸಹಾಯ ಮಾಡಬೇಕು. ಈ ಗಾದೆಯು ಕೊಡುವ ಸಾದೃಶ್ಯ ಬಹಳ ಮನೋಜ್ಞವಾಗಿದೆ. ಪಕ್ಕದ ತಟ್ಟೆಯಲ್ಲಿ ಬಿದ್ದಿರುವ ನೊಣ ನೋಡಿ ನಕ್ಕರೆ ತನ್ನ ತಟ್ಟೆಯಲ್ಲಿ ಬಿದ್ದಿರುವ, ಹೆಗ್ಗಣ ಅದಕ್ಕಿಂತಲೂ ಭೀಕರ ಮತ್ತು ಅಸಹ್ಯವಾದುದ್ದು. ಇದು ಮೇಲುನೋಟಕ್ಕೆ ಹಾಸ್ಯರಸಭರಿತವಾಗಿ ಕಂಡರು ಅಂತರಾಳದಲ್ಲಿ ಧ್ವನ್ಯಾರ್ಥವು ಕಟುಘೋರವಾಗಿದೆ. ಬೇರೆಯವರ ಸ್ಥಿತಿಗಿಂತ ನಮ್ಮ ಸ್ಥಿತಿ ಭಯಂಕರ ಎಂಬುದು ಸೂಚ್ಯ.

"ಹೆಂಗಸಿಗೆ ಹೆತ್ಮೇಲೆ ತಿಳಿತು ಗಂಡಸಿಗೆ ಉತ್ಮೇಲೆ ತಿಳಿತು"

ಗಂಡಸು–ಹೆಂಗಸು ಇಬ್ಬರಿಗೂ ಅರಿವು ಮೂಡಿಸುವ ಪರಿಯನ್ನು ತಿಳಿಸುತ್ತದೆ. ಒಂದು ಹೆಂಗಸಿಗೆ ತನ್ನ ಪಾವಿತ್ರ್ಯದ ಅರಿವಾಗಿದ್ದು ಮಗುವನ್ನು ಹೆತ್ತಮೇಲೆ. ಆ ಮಗುವಿನಿಂದ ಹೆತ್ತ ತಾಯಿಗೆ ತಾಯಿತನದ ಅರಿವಾಗುತ್ತದೆ. ಅದೇ ರೀತಿ ಗಂಡಸಿಗೆ ಹೊಲವನ್ನು ಉತ್ತಮೇಲೆ, ತನ್ನ ಜವಾಬ್ದಾರಿಯ ಅರಿವು ಗಂಡಸುತನ ಪೌರುಷತನದ ಅರಿವು ಮೂಡಿತು. ಸೃಷ್ಟಿ ನಿಯಮದ ಪ್ರಕಾರ ಮನುಷ್ಯನಿಗೆ ಬುದ್ಧಿ ಅರಿವು ಮೂಡುತ್ತದೆ. ಈ ಗಾದೆಯಲ್ಲಿ ಬಳಕೆಯಾಗಿರುವ 'ಹೆತ್ಮೇಲೆ', 'ಉತ್ಮೇಲೆ' ನುಡಿಗಟ್ಟುಗಳು ಅರ್ಥಪೂರ್ಣವಾಗಿವೆ.

"ಏರಿ ಹಿಂದಕ್ಕೆ ಹೋದ ನೀರು
ಯ್ಯಾರತ್ತಿ ಬರುವುದಿಲ್ಲ"

ಇಲ್ಲಿ ದೃಷ್ಟಾಂತವನ್ನು ಕೊಡುತ್ತದೆ. ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ ಎಂಬಂತೆ ಒಂದು ಸಾರಿ ತೆಗೆದುಕೊಂಡ ನಿರ್ಧಾರ ಹೊಡೆದು ಹೋದ ಬದುಕು, ಆಡಿದ ಮಾತು ಯಾವೂ ಮತ್ತೆ ಹಿಂದಕ್ಕೆ ಬರುವುದಿಲ್ಲ ಎನ್ನುವ ಸಂದರ್ಭದಲ್ಲಿ ಮನನೀಯವಾಗಿದೆ. ಹಾಗೆಯೇ ಏರಯ ಹಿಂದಕ್ಕೆ ಹೋದ ನೀರು ಮತ್ತೆ ಏರಿಯನ್ನು ಹತ್ತಿ ಹಿಂದಕ್ಕೆ ಕೆರೆಗೆ, ನದಿಗೆ, ಸಮುದ್ರಕ್ಕೆ ಬರುವುದಿಲ್ಲ. ಹಾಗೆಯೇ ಮನುಷ್ಯ ಒಂದು ಸಾರಿ ದುಡುಕಿ ತಪ್ಪು ಮಾಡಿದರೆ ಮತ್ತೆ ಒಳ್ಳೆಯ ಮೊದಲಿದ್ದ ಪರಿಸ್ಥಿತಿಗೆ ವಾಪಸ್ಸು ಬರುವುದಿಲ್ಲ. ಮಾಡುವ ಕೆಲಸದಲ್ಲಿ ಘನ ನಿರ್ಧಾರಗಳಲ್ಲಿ ದೃಢತೆ ಇರಬೇಕು. ಇಡೀ ದೃಷ್ಟಾಂತದ ಮೂಲಕ ಮನುಷ್ಯನ ದುಡುಕು ಸ್ವಭಾವವನ್ನು ವಿವರಿಸುತ್ತದೆ.

"ಒಳ್ಳೆಯ ಗಂಡಾದ್ರೆ ಒಡವೆಯಾಕೆ? ಹೊಸ ರಾಗಿಹಿಟ್ಟು ಆದ್ರೆ ಹೆಸ್ರು ಯಾಕೆ?"

ಗಂಡ ಹೆಣ್ಣಿನ ಇಡೀ ಜೀವನದ ಅಮೂಲ್ಯ ಆಭರಣ. ಹೆಣ್ಣಿನ ಜೀವನದಲ್ಲಿ ಒಳ್ಳೆಯ ಗಂಡ ಸಿಕ್ಕಿದನೆಂದರೆ ಅದಕ್ಕಿಂತ ಭಾಗ್ಯ ಬೇರೊಂದಿಲ್ಲ. ಅದೇ ರೀತಿ ಹೊಸದಾಗಿ ಬೆಳೆದ ರಾಗ ರುಚಿಕರ. ಅಂತಹ ಮುದ್ದೆ ಆದರೆ ಹೆಸರು (ಸಾಂಬಾರು) ಬೇಡ. ಇಲ್ಲಿ ಒಳ್ಳೆಯ ಗಂಡನನ್ನ ಹೊಸರಾಗ ಹಿಟ್ಟಿಗೆ ಹೋಲಿಸಿದ್ದಾರೆ, ಪ್ರತೀಕವಾಗಿ ಬಳಸಿದ್ದಾರೆ. ಅಂದರೆ ಇಲ್ಲಿ ರೂಪಕಲಂಕಾರವನ್ನು ಕಾಣಬಹುದು.

ಗಾದೆಗಳು ಮನುಷ್ಯನ ಅನುಭವದ ಭಂಡಾರ. ಇದು ಬದುಕಿಗೆ ಮಾತ್ರವಲ್ಲ ಸಾಹಿತ್ಯ ಮತ್ತು ಸಾಂಸ್ಕೃತಿಕ ಲೋಕಕ್ಕೆ ಅಪಾರ ಕೊಡುಗೆ ನೀಡಿದೆ. ಕಾವ್ಯವನ್ನು ಓದಿ ಪಡೆದುಕೊಳ್ಳುವ ಜ್ಞಾನಕ್ಕಿಂತ ಓದದೆಯೇ ತಿಳಿದುಕೊಂಡವರ ಕೈಯಿಂದ ಬನಿಗೂಡಿದ ವೇದವಾಕ್ಯಗಳು. ಕಾವ್ಯಕ್ಕಿಂತಲೂ ಜನರ ರೀತಿನೀತಿಗಳನ್ನು ತಿದ್ದುವ ಪ್ರಭಾವಶಾಲಿ

ಜನಪದ ಸಾಹಿತ್ಯ ಪ್ರಕಾರ ಗಾದೆಗಳು. ಕಾವ್ಯದ ಪರಿಣಾಮ ತಿಳಿಯಲು ಸಮಯ ಹಿಡಿದರೆ ಗಾದೆಯ ಪರಿಣಾಮ ಬಹಳ ಬೇಗ ಮುಟ್ಟುತ್ತದೆ. ಜನಜೀವನದ ಸಂಸ್ಕೃತಿ ಮತ್ತು ಸಾಹಿತ್ಯ ಗಾದೆಗಳಲ್ಲಿ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದು. ಗಾದೆಗಳು ಜೀವನಮೌಲ್ಯಗಳನ್ನು ಹೇಳುವ ಕಾನೂನಿನ ಪರಿಪಾಲಕನಂತೆ.

ಪ್ರತಿಯೊಂದು ಗಾದೆಯು ಆಯಾಯ ಸಂಸ್ಕೃತಿ ಮತ್ತು ಪ್ರಾದೇಶಿಕತೆಯನ್ನು ಹೊಂದಿರುತ್ತವೆ. ಪ್ರತಿಯೊಂದು ಪ್ರದೇಶವು ತನ್ನದೇ ಆದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಬೆಟ್ಟಗುಡ್ಡ, ಇಳಿಜಾರು, ಅರಣ್ಯ ಪ್ರದೇಶ, ಬಯಲು ಪ್ರದೇಶ, ಮಲೆನಾಡು ಪ್ರದೇಶ ಮುಂತಾದ ಪ್ರಾದೇಶಿಕ ವೈಶಿಷ್ಟ್ಯಗಳಿಂದ ಕೂಡಿರುತ್ತದೆ. ಗೊಂಡಾರಣ್ಯದಲ್ಲಿ ವಾಸಿಸುವ ಮನುಷ್ಯರ ಸ್ವಭಾವವು ಅರಣ್ಯ ಸಂಸ್ಕೃತಿಯನ್ನು ಹೊಂದಿದ್ದರೆ, ಒಂದೇ ನೀತಿ ನಡಾವಳಿಗಳನ್ನು ಒಂದೇ ದೇವತಾ ಆರಾಧನೆ, ಒಂದೇ ಮತಧರ್ಮಗಳನ್ನು ಹೊಂದಿರುವುದು. ಕಾಡು ಜನರ ಸಂಸ್ಕೃತಿಯಾಗಿದೆ. ಮಲೆನಾಡು ಪ್ರದೇಶದಲ್ಲಿ ವಾಸಿಸುವ ಜನರ ಸಂಸ್ಕೃತಿಯು ತನ್ನದೇ ಆದ ಹೊಲಗದ್ದೆ, ತೋಟ ತುಡಿಗಳಲ್ಲಿ ಅಲ್ಲೊಂದು ಇಲ್ಲೊಂದು ಮನೆಗಳಿಂದ ಕೂಡಿದ ತನ್ನದೇ ಮನೆತನಗಳಿಂದ ರೂಢಿ ಸಂಪ್ರದಾಯಗಳಿಂದ ಕೂಡಿರುವುದು ಮಲೆನಾಡು ಸಂಸ್ಕೃತಿಯಾಗಿದೆ. ಆಧುನಿಕ ಸಂಸ್ಕೃತಿಯು ವಿಶಿಷ್ಟ ಸಂಸ್ಕೃತಿಯಾಗಿದೆ. ವಾಹನದಟ್ಟಣೆ, ಜನದಟ್ಟಣೆ, ಸರ್ಕಾರಿ ಸಂಸ್ಥೆಗಳಿಂದ ಶಿಷ್ಟಾಚಾರಕ್ಕೆ ಒಳಪಟ್ಟಿದ್ದು ನಾಗರಿಕ ಸಂಸ್ಕೃತ. ತಲಾತಲಾಂತರದಿಂದ ವಂಶಪಾರಂಪರ್ಯವಾಗಿ ಸಂಸ್ಕೃತಿಯ ಮುಂದುವರೆಯುವಿಕೆಗೆ ದ್ಯೋತಕ. ನಾಡ ಸಂಸ್ಕೃತಿಗೂ ಗ್ರಾಮೀಣ ಸಂಸ್ಕೃತಿಗೂ, ಕಾಡುಸಂಸ್ಕೃತಿಗೂ ಭಿನ್ನತೆ ಇದೆ. ಸಂಸ್ಕೃತಿಯ ಜೀವನ ವಿಧಾನಗಳ ಮೊತ್ತವಾಗಿದೆ. ಪ್ರಾದೇಶಿಕವಾಗಿ ದೊಡ್ಡಮರ ಗ್ರಾಮವು ಅರೆಮಲೆನಾಡು ಪ್ರದೇಶವಾಗಿದ್ದು. ಒಕ್ಕಲಿಗ ಜಾತಿಯವರು ಹೆಚ್ಚಾಗಿ ವಾಸಿಸುತ್ತಿರುವ ಪ್ರದೇಶ. ಅವರ ಸಂಪ್ರದಾಯ ಮತ್ತು ದೊಡ್ಡಮರ ಗ್ರಾಮದ ಪ್ರಾದೇಶಿಕ ಬೆಳೆಗಳನ್ನು ಕುರಿತ ಅನೇಕ ಗಾದೆಗಳನ್ನು ಗುರುತಿಸಬಹುದು.

"ಒಕ್ಕಲಗಿತ್ತಿಗೆ ಹೊಕ್ಕಳ ತನಕ ತಾಳಿ"

ಒಂದೊಂದು ಜಾತಿಯಲ್ಲಿ ಒಂದೊಂದು ರೀತಿಯ ಸಂಪ್ರದಾಯಗಳಿರುತ್ತವೆ. ತಾಳಿಯನ್ನು ಗುಂಡಿಗೆಯ ಮೇಲ್ಭಾಗಕ್ಕೆ ಮತ್ತು ಗುಂಡಿಗೆ(ಎದೆ)ಯ ಕೆಲಭಾಗದಲ್ಲಿ ಧರಿಸುವುದು ಸಂಪ್ರದಾಯ. ಒಕ್ಕಲಿಗರಲ್ಲಿ ಮದುವೆಯಾದ ಹೆಣ್ಣಿಗೆ ಹೊಕ್ಕಳು ತನಕ ತಾಳಿ ಇರುತ್ತದೆ ಎನ್ನುವ ಸಂದರ್ಭದಲ್ಲಿ ಬಳಸುತ್ತಾರೆ. ಸಾಮಾನ್ಯವಾಗಿ ಒಕ್ಕಲಿಗರಿಗೆ(ಗೌಡರು) ಹೊಕ್ಕಳ ತನಕ ತಾಳಿಯನ್ನು ಧರಿಸಬೇಕು ಎಂಬುದು

ವಿಧಿಬದ್ಧವಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಫ್ಯಾಷನ್‌ಗಾಗಿ ಕುತ್ತಿಗೆ ಮಟ್ಟಕ್ಕೆ ಧರಿಸುವುದನ್ನು ಕಾಣಬಹುದು.

"ಕದ್ರಕ್ಕಿಂತ ಮುದ್ರದು ಲೇಸು"

ಪ್ರಾದೇಶಿಕ ಆಹಾರ ಧಾನ್ಯವಾಗಿ ಬಳಸುವ ರಾಗಿಯ ಮಹಿಮೆಯನ್ನು ಬಿತ್ತರಿಸುತ್ತದೆ. ರಾಗಿಯ ಮುದ್ದೆ ಮತ್ತು ರೊಟ್ಟಿಯನ್ನು ಮಾಡುವ ಬಗೆಯನ್ನು ತಿಳಿಸುತ್ತದೆ. ರೊಟ್ಟಿ ಮಾಡುವಾಗ ಹಿಟ್ಟು (ಮುದ್ದೆ), ರಾಗಿಯ ತರಿ ಹಾಕಿ ಕದಡಬೇಕು. ಅದು ಕಷ್ಟದ ಕೆಲಸ. ಅದಕ್ಕಿಂತಲೂ ತೊಟ್ಟಬೇಕು. ಇನ್ನೂ ಕಷ್ಟದ ಕೆಲಸ. ಮುದ್ದೆಮಾಡಿ ತಿರುವುದು, ಕಟ್ಟುವುದು ಉತ್ತಮ ಎಂದು ಹೇಳುತ್ತದೆ.

"ತಾನು ಹೆಂಗಸಾಗ ರಾಗಿ ರೊಟ್ಟಿ ಒಗೆಸಿದ್ದಳಂತೆ"

"ಒಳ್ಳೆಯ ಗಂಡಾದ್ರೆ ಒಡವೆಯಾಕೆ? ಹೊಸ ರಾಗಿ ಹಿಟ್ಟು ಆದ್ರೆ ಹೆಸ್ರುಯಾಕೆ?"

"ಸತ್ತ ಗಂಡ ಕನಸಿಗೆ ಬಂದ್ರೆ ಹಿಟ್ಟು ಇಕ್ಕಿ ಬಟ್ಟೆ ಕೊಡುತ್ತಾನಾ"

"ದನಕಾಯ ಹುಡುಗನಿಗೆ ಗೌಡಿಕೆ ಕೊಡುವತ್ತಿಗೆ

ವಡೆ ಹೊಲವ ಕೊಯ್ದು ಒಡ್ಡಿದ್ದನಂತೆ"

ಈ ಮುಂತಾದ ಗಾದೆಗಳು ಪ್ರಾದೇಶಿಕ ಬೆಳೆಯಾದ ರಾಗಿಯನ್ನು ಕುರಿತವು. ದೊಡ್ಡಪುರ ಗ್ರಾಮವು ಅದರಲ್ಲಿಯೂ ಹಾಸನ ಜಲ್ಲೆಯೂ ರಾಗಿಮುದ್ದೆಗೆ ರಾಗಿ ಬೆಳೆಗೆ ಹೆಸರುವಾಸಿಯಾಗಿದೆ. ಇಂತಹ ಪ್ರಾದೇಶಿಕ ಬೆಳೆ ಅಲ್ಲಿನ ಜನರ ಜೀವನದ ಅವಿಭಾಜ್ಯ ಅಂಗವಾಗಿದೆ. ರೊಟ್ಟಿ, ಮುದ್ದೆಯನ್ನು ಮಾಡುವುದನ್ನು ಕರಾರುವಾಕ್ಕಾಗಿ ಕಲಿತು-ಕೊಳ್ಳಬೇಕು. ಒಂದು ಪ್ರದೇಶದ ಜನಜೀವನಕ್ಕೆ ಪ್ರಾದೇಶಿಕ ಬಹಳ ಮುಖ್ಯವೆಂದು ತಿಳಿಸುತ್ತದೆ. ಪ್ರಾದೇಶಿಕ ಮೌಲ್ಯಗಳು ತನ್ನತನವನ್ನು ಗಟ್ಟಿಯಾಗ ಸಂಸ್ಕೃತಿಯನ್ನು ಕಟ್ಟಿಕೊಡುತ್ತವೆ.

ಗಾದೆಗಳಲ್ಲಿ ಸಾಹಿತ್ಯ., ಸಂಸ್ಕೃತಿಯ ಅಂಶಗಳ ಜೊತೆಗೆ ಸಾಮಾಜಿಕ ಮತ್ತು ಕೌಟುಂಬಿಕ ಮೌಲ್ಯಗಳನ್ನು ಮನತಟ್ಟುವಂತೆ ಕಟ್ಟಿಕೊಡುತ್ತವೆ. ವಿಷಯಾಧಾರಿತವಾಗ ಗಾದೆಗಳನ್ನು ವರ್ಗೀಕರಿಸಿ ನೋಡಬಹುದು. ಕೃಷಿ ಕ್ಷೇತ್ರ, ಹವಾಮಾನ, ಮನುಷ್ಯ ಸ್ವಭಾವಗಳು, ದಾನಧರ್ಮ, ಸಂಪ್ರದಾಯ, ಪ್ರಾಣಿಗಳಿಗೆ ಸಂಬಂಧಿಸಿದಂತೆ, ಸಮಾಜದ ನೀತಿ ನಡಾವಲಿಗೆ ಸಂಬಂಧಿಸಿದಂತೆ, ಆಸ್ತಿ ಹಂಚಿಕೆ ಮುಂತಾದವುಗಳಿಗೆ ಸಂಬಂಧಿಸಿದಂತೆ ಗಾದೆಗಳ ಬಳಸುತ್ತಾರೆ. ಕುಟುಂಬ, ಸಮಾಜ, ವ್ಯಕ್ತಿ, ನಡಾವಳಿಗಳು

ಮುಂತಾದವುಗಳು ಒಂದಕ್ಕೊಂದು ಅಂತರ್ ಶಿಸ್ತಿಯವಾಗಿ ಅವಿನಾಭಾವ ಸಂಬಂಧವನ್ನು ಹೊಂದಿವೆ.

ಸಮಾಜದಲ್ಲಿ ವ್ಯಕ್ತಿಯು ನೀತಿವಂತನಾಗಿ ಬದುಕಬೇಕು ಎಂಬುದು ಗಾದೆಗಳ ಮಹತ್ತರವಾದ ಆಶಯವಾಗಿದೆ. ಮಾನವ ಸ್ವಭಾವಗಳನ್ನು ಕುರಿತಂತೆ ಗಾದೆಗಳನ್ನು ನೋಡೋಣ.

'ಅಳುತ್ತಾ ಹೋದ ನಾಯಿ ಮೊಲ ಹಿಡಿಯುತ್ತಾ'

'ಸಾಕ್ಷಿ ಹೇಳೆ ಸಗಣಗಳ್ಳೆ ಅಂದರೆ ಹೆಗಲು ಮುಟ್ಟಿ ನೋಡಿಕೊಂಡಿದ್ದಳಂತೆ"

'ಅಲ್ಲಿ ಹಾರಾಣ್ಣ ಇಲ್ಲಿ ತೊರಣ್ಣ'

'ಕುಂಡನಿಗೆ ಬಾಡು ಹಾಕವತ್ತಿಗೆ ನನಗೆ ಇಷ್ಟು ಹಾಕಿದರಲ್ಲ ಮನೆ ಮಂದಿಯಲ್ಲಾ ಎಷ್ಟು ತಿಂದಿರಬೇಕು ಅಂದುಕೊಂಡನಂತೆ'

'ಒಂದು ಕಣ್ಣಿಗೆ ಬೆಣ್ಣೆ ಒಂದು ಕಟ್ಟಿಗೆ ಸುಣ್ಣ'

'ಕಣ್ಣಲ್ಲಿ ನೋಡಿ, ಮನದಲ್ಲಿ ಸೌರಿಸಲಿಲ್ಲ'

'ನಾನ್ ಕಳ್ಳಿ ಪರ್ರ ನಂಬೆ'

'ಪರರ ವಸ್ತು ಪಾಷಾಣ'

'ಆ ಮಳ್ಳಿ ಈ ಮಳ್ಳಿ ಯಾರು ಕರದ್ರು ಹೋಗು ಮಳ್ಳಿ'

'ಮುಳ್ಳನ್ನ ಮುಳ್ಳಿನಿಂದಲೇ ತ್ಯಗಿಬೇಕು'

'ಇಕ್ಕ ನಾರದ ಕೈ ಎಂಜಲು ಆಯಿತೆ ಮುಂದಕ್ಕೆ ಹೋಗ ಬಾ ದಾಸಪ್ಪ'

'ಸತ್ತವರ ಮನೆಯದ ಇದ್ದವರು ಬಾಚಿಕೊಂಡರಂತೆ'

'ಮಾಡದು ಅನಾಚಿದ ಮನೆ ಮುಂದೆ ಬೃಂದಾವನ'

'ಕಂಡದ್ದನ್ನ ಕಂಡಂಗೆ ಹೇಳಿದರೆ ಕೆಂಡದಂತಹ ಕೋಪ'

'ಹೀನ ಸುಳಿ ಬೋಳಿಸಿದರು ಹೋಗಲ್ಲ'

'ತೊಟ್ಲುನೂ ತೂಗುತ್ತಾನೆ ತಿಗನು ಜಿಂಟುತ್ತಾನೆ'

'ಬಡವಳು ಒಡವೆ ಕಿತ್ತುಕೊಂಡ್ರೆ ವದಲಿಗಿತ್ತಿಗೇಕೆ ಗೊಡಗಾಟ'

'ಕಣ್ಣಲ್ಲಿ ನೊಡಿ ಮನದಲ್ಲಿ ಸೌರಿಸಲಿಲ್ಲ'

'ಹುಡುಗೆ ಹುಡುಗಲ್ಲ ಹುಡುಗನ ಹೆಂಡತಿ ಗರ್ತಿಯಲ್ಲ'

'ಇದ್ದರೆ ಕಣ್ ಬೇನೆ ಹೋದ್ರೆ ಹೊಟ್ಟೆ ಉರಿ'

'ಜಾತಿ ಗೆಟ್ಟರು ನೀತಿಗೆಡಬಾರದು'

'ಮೀಸೆ ಮರೆ ನಗಾಡುವ ಗಂಡಸ್ಸುವೆ ಅಳ ಹೆಂಗಸ್ಸುವೆ ನಂಬಬಾರದು'

'ಜಾತಿ ಗುಣವೊ ನೀತಿ ಗುಣವೊ ಕುಂಬಾರು ಮನೆ ಕುಡಿಕೆ ಗುಣವೊ'

'ಹಿರಿಯಕ್ಕಳ ಚಾಳಿ ಮನೆ ಮಂದಿಗೆಲ್ಲ'

'ಅಳಿಯನ ಸಿರಿಗೆ ಅತ್ತೆ ತದ್ಲು ಹೊತ್ತುಕೊಂಡು ಕುಣಿದಳಂತೆ'

'ಅತ್ತೆ ಅಗಸನ ಜೊತೆ ಹೋದಳಂತೆ ಸೊಸೆಗೆ ಹೇಳಿದಳಂತೆ ಜೋಪಾನ'

'ಕಾಸು ಕೊಡಲಿಲ್ಲ ಹೊಗೆಸೊಪ್ಪು ಸುಡಲಿಲ್ಲ'

'ಹಗಲೆಲ್ಲ ಹಾರಾಟ ಗಂಡ ಬಂದಾಗ ಕುಚ್ಚಾಟ'

'ದಾಸಯ್ಯ ಒಗೆಸಿದ್ದನಂತೆ ಒಸ್ಸಾರದಳ'

'ಬಾಗಲಲ್ಲಿ ಹೋಗದನ್ನ ಬಿಟ್ಟಿದ್ದರಂತೆ ಒಚ್ಚಲು ಕಂಡಿಗೆ ಬಟ್ಟೆ ಗಿಡಿಗಿದರಂತೆ'

'ವಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು'

'ಬಾಳ್ನಾರದ ಮುಕ್ಕ ಬಾಯಿ ಒಡಕಂತೆ ತಾಳ್ನಾರದ್ದು
ತಿಗಾ ಒಡಕಂತೆ'

'ತಾನು ತಿನ್ನದೆ ತೌಡಂತೆ ವಾರಕ್ಕೆ ಹಂದಿ ಸಾಕಿದ್ಲಂತೆ'

'ಹೊಸದರಲ್ಲಿ ನನ್ನ ಗಂಡ ಕಸಹಾಕಿಕೊಡ, ನೀರು ತರಸಿ ಕೊಡ
ಕೊನೆ ಕೊನೆಗೆ ತಗೊಂಡನಂತೆ ಕಸ್ಗೊಲ್ಲಾ'

'ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಎದ್ದು'

'ನಾಯಿ ಮಲೆಯಲ್ಲಿ ಹಾಲಿದ್ದರೇನು ದೇವರಿಗೂ ಅಲ್ಲ
ದಿಂಡ್ರುಗೂ ಅಲ್ಲ'

'ಇಲ್ಲ ಅಂತಹ ಕೊಡಗಬಾರ್ದು ಈತೆ ಅಂತಹ
ಮೆರೆಯಬಾರದು'

'ಬೀದಿ ಲೋಗರ ಕೆಣ್ಕಾ ಅವರ ಬಂದು ತಣ್ಕಾ'

'ಸಾವಿಗೆ ಒತ್ತಿಕೊಂಡು ಕಂಡ್ರ ಮನೆ ಕಾಯಲ್‌ಗೆ
ಕಾಯುತ್ತ ಕುತ್ತಿದ್ದಳಂತೆ'

'ಪಕ್ಕ ತಟ್ಟೆಯಲ್ಲಿ ನೊಣ ಬಿದ್ದುದ್ದು ನೋಡಿ ನಗುತ್ತಿದ್ನಂತೆ ಅವನ ತಟ್ಟೆಯಲ್ಲಿ ಹೆಗ್ಗಣಾನೇ ಸತ್ತಿತಂತೆ'

'ಭಂಡ ಬದುಕಿನಂತೆ ಛಲಗಾರ ಕೆಟ್ಟನಂತೆ'

'ನಾನು ಬಲ್ಲದ್ನ ನನ್ನೂರು ಗೌಡ ಬಲ್ಲನಾ'

‘ಹೊಟ್ಟೆಗೆ ಇಲ್ಲದವನೆ ಬಡವ ಕೈಗಿಲ್ಲದವನೆ ಕಳ್ಳ’

‘ಬಡಿವಾರಕ್ಕೆ ಬಳಿದು ಸಿಕ್ಕಿದ್ಲಂತೆ ಹಿತ್ತಲಿಗೆ

ಹೋಗಿದ್ಲಂತೆ ಕೈ ನೆಕ್ಕದಿಕ್ಕೆ’

‘ತಾಳಿದೋನು ಒಬ್ಬ ಬಾಳುತ್ತಾನೆ’

‘ಮಾರಿಕೊಂಡು ಹೋಗೋಳು ಮನೆ ಮಾಡ್ಯಾಳಾ’

‘ಆತ್ಮ ತಡಿನಾರದವಳು ಅಳಿಮಯ್ಯನ ಕುಟಿ ಉಂಡಳಂತೆ’

‘ಹಲ್ಲು ಬಂದ ಕರಬಗ್ಗಲ್ಲಾ’

‘ನಾನು ನಿನ್ನ ಹಾಗೆ ಹುಟ್ಟಿ ಗೊರವ’

ಈ ಎಲ್ಲಾ ಗಾದೆಗಳು ಮನುಷ್ಯನ ಒಳ್ಳೆಯ ಗುಣಗಳಿಗಿಂತ ಕೆಟ್ಟಗುಣಗಳನ್ನು ಎತ್ತಿ ತೋರಿಸುತ್ತದೆ. ಮಾನವ ಸ್ವಭಾವಗಳು ಸರಿಯಾದ ರೀತಿಯಲ್ಲಿ ಇದ್ದರೆ ಚೆಂದ ಎಂಬುದನ್ನು ಮನಮುಟ್ಟುವಂತೆ ಸೂಚಿಸುತ್ತವೆ. ಆಸೆ, ಅತಿಯಾಸೆ, ಬಡಾಯಿ, ಜಂಭ, ತಾಳ್ಮೆ, ಆತುರ, ಅಸೂಯೆ, ಮುಕ್ಕಟೆ, ಈರ್ಷೆ, ಸಮತೂಕ, ಬಡಿವಾರ, ಅಹಂಕಾರ, ಕಳ್ಳತನ, ಕಳ್ಳಾಟ, ಮಳ್ಳಾಟ, ಅಂಜಿಕೆ, ಮೈಗಳ್ಳತನ, ಆತುರ, ಕಾತುರ, ಸೇಡಿಗೆ ಸೇಡು, ಜುಗ್ಗತನ ಮುಂತಾದ ಮಾನವ ಸ್ವಭಾವಗಳನ್ನು ಹೇಳುತ್ತದೆ. ದಾನ, ಧರ್ಮ, ತಾಳ್ಮೆ, ಕರುಣೆ ಮುಂತಾದ ಉನ್ನತ ಗುಣಗಳನ್ನು ಪ್ರತಿಬಿಂಬಿಸುತ್ತದೆ. ಮಹಾಕಾವ್ಯಗಳು, ಪುರಾಣಗಳು, ವೇದಗಳು, ಕಥೆ, ಕಾದಂಬರಿ, ನಾಟಕಗಳು ಮುಂತಾದವು ಜೀವನ ತತ್ವವನ್ನು ಹೇಳುತ್ತವೆ. ಹಾಗೆಯೇ ಗಾದೆಗಳು ಜೀವನ ನೈಜತೆಯ ಜೊತೆಗೆ ಮನುಷ್ಯತೆ ನಡತೆಗಳನ್ನು ಸೂಚಿಸುತ್ತವೆ.

ಪ್ರಕೃತಿ ಸಂಪನ್ಮೂಲಗಳು ಮಾನವನ ಅಭಿವೃದ್ಧಿಗೆ ಬೇಕಾದ ಮೂಲಭೂತ ಸಂಪತ್ತು. ಇಂತಹ ಪರಿಸರ ಮನುಷ್ಯನ ಜೀವನದಲ್ಲಿ ಸಮ್ಮಿಳಿತವಾಗಿದೆ. ಭಾರತದಂತಹ ದೇಶದಲ್ಲಿ ಕೃಷಿಯು ಪ್ರಧಾನವಾದ ಕಸುಬಾಗಿದೆ. ಪ್ರಾಕೃತಿಕ ಸಂಪನ್ಮೂಲಗಳು ನೀರು, ಹವಾಮಾನ, ಪ್ರಾಣಿ, ಪಕ್ಷಿ, ಭೂಮಂಡಲ, ವಾಯುಮಂಡಲ, ಸೂರ್ಯ, ಚಂದ್ರ ತಾರೆ ಎಲ್ಲವೂ ಮಾನವನ ಜೀವನಕ್ಕೆ ಬಹಳ ಅವಶ್ಯಕ. ಇಂತಹ ಪ್ರಕೃತಿ ಅಂಶಗಳು ಗಾದೆಯ ಮಾತುಗಳಲ್ಲಿ ಬಳಕೆಯಾಗಿವೆ. ಉದಾ:

‘ತಾನು ತಿನ್ನದೆ ತೌಡಂತೆ ವಾರಕ್ಕೆ ಹಂದಿ ಸಾಕಿದ್ಲಂತೆ’

‘ವಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು’

‘ಆಡವೆರಡು ಆಡುಹೋದ ಹಾಗೆ ನೋಡವೆರಡು ಕಣ್ಣು ಹೋದ ಹಾಗೆ! ’

‘ನಾನು ನಿನ್ನ ಹಾಗೆ ಕಣೋ ಹುಟ್ಟಿ ಗೊರವ’

'ವನ ಕಾಯ ಹುಡುಗನಿಗೆ ಗೌಡಿಕೆ ಕೊಡವತ್ತಿಗೆ '

ವಡೆ ಹೊಲ ಕೂದು ಬಿಟ್ಟಿದ್ದನಂತೆ'

'ಸುಂದ್ರ ಬಾಳೆಹಣ್ಣು ಕಂಡೌನ್ ಬಾಯಿಗೆ ಮಣ್ಣು'

'ಆನೆ ಗಾತ್ರ ತಿನ್ನದಿಕ್ಕೆ ಆಡುಮರಿ ಅಡ್ವೆ'

'ಕಾಸು ಕೊಡಲಿಲ್ಲ ಹೊಗೆಸೊಪ್ಪು ಸುಡಲಿಲ್ಲ'

'ಕಾಲ್ ಕೆಟ್ಟಾಗ ಕಾಗೆ ರಾಗ ತಿಂತು'

'ಚೊಗಚಗಾತಿ ಮನೆಯಲ್ಲಿ ಚಿಗಟ ಮೂಗಂಡುಂಗ'

'ಹುಯ್ಯುವುದಕ್ಕೆ ಮಳೆಯಲ್ಲ ಕಾಯುವುದಕ್ಕೆ

ಬಿಸಿಲಲ್ಲ'

'ಅಲಲ ಅನ್ನೋ ಹಳ್ಳಿಮರ ನಂಬಹುದು ಮಳ್ಳಿ'

ಹಂಗೆ ಇರುವ ಕಳ್ಳಿ ನಂಬುವುದಕ್ಕೆ ಆಗುವುದಿಲ್ಲ'

ಕೆಲವೊಂದು ಗಾದೆಗಳು ಕಾನೂನಿನ ರೀತಿ ಕೆಲಸ ಮಾಡುತ್ತವೆ

'ನೆವ ಇಲ್ಲದೆ ಜವರಾಯ ತಗತಾನ'

'ಒಬ್ಬನಿಗೆ ಹೆಂಡ್ತಿಯಾಗಿ ಒಮ್ಮಕ ಗರತಿ ಆಗು'

'ತಕ್ಕಟ್ಟು ಉಂಡು ಮುಕ್ಕಟ್ಟು ಬಳಸು'

'ಕಳ್ಳನ ಹೆಂಡತಿ ಯಾವತ್ತಿದ್ರು ಮುಂಡೆ'

'ಗಂಡ ಹೆಂಡತಿ ಜಗಳ ಉಂಡು ಮಲಗುವತನಕ'

ದಿನನಿತ್ಯದ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಗಾದೆಗಳು ನಿತ್ಯ ಜೀವನದಲ್ಲಿ ಬಳಕೆಯಾಗುವ ಕಾನೂನುಗಳಾಗಿವೆ. ಮನುಷ್ಯನಿಗೆ ಹೊಡೆದು ಬುದ್ಧಿ ಹೇಳುವುದಕ್ಕಿಂತ ಬೈಯುವ ಮೂಲಕ ನೀತಿಪಾಠ ಹೇಳುತ್ತವೆ.

ಒಟ್ಟಾರೆ ಗಾದೆಗಳ ಸಂಗ್ರಹಿತ ಸಂಕಲನಗಳು ಪ್ರಕಟವಾಗಿವೆ. ಅದರಲ್ಲಿಯೂ ಗಾದೆಗಳ ಸಂಕಲನಗಳಲ್ಲಿ ಗಾದೆಗಳು 'ಅ' ಕಾರಾದಿಯಾಗಿ ಪ್ರಕಟಿಸಿರುವುದನ್ನು ಕಾಣಬಹುದು. ಇತ್ತೀಚಿನ ದಿನಗಳಲ್ಲಿ 'ಅ'ಕಾರಾದಿಯಾಗಿ ಗಾದೆಗಳನ್ನು ಪ್ರಕಟಿಸು-ವುದಕ್ಕಿಂತ ವಿಷಯಾಧಾರಿತವಾಗಿ ಗಾದೆಗಳ ವಿಂಗಡನೆ ಮಾಡುವುದು ಸೂಕ್ತವೆನಿಸುತ್ತದೆ. ಉದಾ:- ಕೃಷಿಗೆ ಸಂಬಂಧಿಸಿದ ಗಾದೆಗಳು, ಮಾನವ ಸ್ವಭಾವಗಳಿಗೆ ಸಂಬಂಧಿಸಿದ ಗಾದೆಗಳು ಮುಂತಾಗಿ ವಿಂಗಡಿಸಬಹುದು. ಗಾದೆಗಳನ್ನು ಸಂಗ್ರಹಿಸುವಾಗ ಮೂಲಕ್ಕೆ ಚ್ಯುತಿಬಾರದಂತೆ ಆ ಪ್ರದೇಶದ ಭಾಷೆಯ ಸೊಗಡುತನಕ್ಕೆ

ಅನುಗುಣವಾಗಿ ಸಂಗ್ರಹಿಸಬೇಕು. ಎಷ್ಟೋ ಗಾದೆಗಳು ಮೂಲಭಾಷೆಯ ಸೊಗಡು–ತನವನ್ನು ಬಿಟ್ಟು ಅಲ್ಪಸ್ವಲ್ಪ ವ್ಯತ್ಯಾಸವಾಗಿ ಗ್ರಂಥಸ್ಥ ಭಾಷೆಯಿಂದ ರಚನೆಯಾದವು–ಗಳಾಗಿವೆ. ಇಲ್ಲಿಯವರೆಗೆ ಗಾದೆಗಳ ಸಂಗ್ರಹಕಾರ್ಯ ನಡೆದಿದೆಯೇ ವರತು ಗಾದೆಗಳನ್ನು ಯಾವ ಸಂದರ್ಭದಲ್ಲಿ ಬಳಸುತ್ತಾರೆ ಎಂದು ತಿಳಿಸುವುದು ಸೂಕ್ತವೆನಿಸುತ್ತದೆ. ಗಾದೆಗಳನ್ನು ಯಾವ ಸಂದರ್ಭದಲ್ಲಿ ಬಳಸುತ್ತಾರೆ ಎಂಬುದನ್ನು ತಿಳಿಸದಿದ್ದರೆ ಅಸಂದರ್ಭವಾಗಿ ಬಳಕೆಯಾಗಿರುವುದನ್ನು ಕಾಣಬಹುದು. ಸರಿಯಾದ ಸಂದರ್ಭ ಗಾದೆಗಳ ಮೌಲ್ಯಕ್ಕೆ ಸೂಕ್ತ ಉದಾಹರಣೆಗೆ 'ನಾಯಿ ಬಾಲಕ್ಕೆ ದಬ್ಬೆ ಕಟ್ಟಿದರೆ ಡೊಂಕಾಗದು ಬಿಡುತ್ತಾ' ಇಲ್ಲಿ ನಾಯಿಬಾಲ ಯಾವಾಗಲೂ ಡೊಂಕು(ಸೊಟ್ಟ). ಆ ಬಾಲ ನೇರವಾಗಲೆಂದ ಕಟ್ಟಿಗೆಯಿಂದ ದಬ್ಬೆಯನ್ನು ಕಟ್ಟುತ್ತಾರೆ. ಆದರೂ ನಾಯಿಯ ಬಾಲ ನೇರವಾಗುವುದಿಲ್ಲ. ಇದು ಮೇಲ್ನೋಟದ ಒಂದು ದೃಷ್ಟಾಂತವಾದರೆ ಇಲ್ಲಿನ ಸಂದರ್ಭ ಮಾನವ ಗುಣಸ್ವಭಾವಗಳಿಗೆ ಸಂಬಂಧಿಸಿದೆ. ಮಾನವನ ಹುಟ್ಟುಗುಣ ಸುಟ್ಟರೂ ಹೋಗುವುದಿಲ್ಲ ಎಂಬುದು ಈ ಗಾದೆಯ ಸಂದರ್ಭ. ಮನುಷ್ಯ ಕೆಟ್ಟ ಗುಣಗಳು ಎಷ್ಟೇ ತಿದ್ದಿದರೂ ತೀಡಿದರೂ ಬದಲಾಗುವುದಿಲ್ಲ ಎಂದು ನಾಯಿಯ ಕೊಂಕು ಬಾಲಕ್ಕೆ ಹೋಲಿಸಿ ಹೇಳಲಾಗಿದೆ. ಹಾಗೆಯೇ 'ಎರೆಹೊಲ ಲೇಸು ಕರೆಹೆಂಡ್ರು ಲೇಸು'. ಇಲ್ಲಿ ಕಪ್ಪು ಬಣ್ಣದ ಮಹಿಮೆಯನ್ನು ತಿಳಿಸುತ್ತವೆ. 'ಕಪ್ಪು' ತಿರಸ್ಕಾರಕ್ಕೆ, ಕೆಟ್ಟದ್ದು ಎಂಬರ್ಥದಲ್ಲಿ ಬಳಕೆಯಾಗುತ್ತದೆ. ಕಪ್ಪು ಮೆಚ್ಚಿಗೆಗೆ ಅನರ್ಹವಾದ ಬಣ್ಣವಾಗಿದೆ. ಎರೆಹೊಲದಲ್ಲಿ ಬೆಳೆ ತುಂಬಾನೆ ಉಲುಸಾಗಿ ಬೆಳೆಯುತ್ತದೆ. ಎರೆಹೊಲದಲ್ಲಿ ಹಾಕಿದ ಬೆಳೆಗಳು ಮೋಸ ಆಗುವುದಿಲ್ಲ. ಹಾಗೆಯೇ ಕರೆ ಹೆಂಡ್ರು ಲೇಸು. ಕಪ್ಪು ಬಣ್ಣದ ಹೆಂಡತಿ ಕಪ್ಪಗಿರಬಹುದು. ಆದರೆ ಅವಳ ಗುಣಗಳು ಕಪ್ಪಾಗಿರುವುದಿಲ್ಲ ಎಂಬುದು. ಸಂಸಾರಕ್ಕೆ ಹೆಂಡತಿಯ ಬಣ್ಣ ಮುಖ್ಯವಲ್ಲ. ಅವಳ ಗುಣಸ್ವಭಾವ, ಹೊಂದಾಣಿಕೆ ಮುಖ್ಯವಲ್ಲ. ಕಪ್ಪು ಕಸ್ತೂರಿ ಎಂಬ ಮಾತು ಇಲ್ಲಿ ಮನನೀಯ. ಹೀಗೆ ಗಾದೆಗಳನ್ನು ಯಾವ ಸಂದರ್ಭದಲ್ಲಿ ಬಳಸುತ್ತಾರೆ ಎಂಬುದು ಗಮನಾರ್ಹ. ಆದ್ದರಿಂದ ಗಾದೆಗಳಿಗೆ ಸಂದರ್ಭ ಬಹಳ ಮುಖ್ಯ ಎಂಬುದು ಮೂಲ ಉದ್ದೇಶವಾಗಿದೆ. ಆಗ ಗಾದೆಗಳಿಗೆ ಮೌಲ್ಯಯುತವಾದ ತೂಕಬರುತ್ತದೆ. ಗಾದೆಗಳು ಜನಪದ ಸಾಹಿತ್ಯ ಪ್ರಕಾರವಾಗಿದ್ದು, ಸಾಹಿತ್ಯ ಕೊಡುಗೆಗಳಲ್ಲಿ ಗಾದೆಗಳ ಕೊಡುಗೆ ಅಪಾರ.

ಗಾದೆಯು ಮಾತಿಗೊಂದು ಘನತೆ ಗಾಂಭೀರ್ಯ, ಸುಮಧುರ, ಏಕತಾನತೆ, ಬಿಗಿಹಿಡಿತವನ್ನು ತಂದುಕೊಡುತ್ತದೆ. ಪ್ರಾಚೀನ ಗಾದೆಗಳು ಸ್ಥಾನೀಯ ಸೊಗಡ, ಜಾನಪದೀಯ ಸೊಗಡನ್ನು ಒಳಗೊಂಡು ಬಳಕೆಯಾಗಿದೆ. ಗಾದೆಯು ನೀಿಸು ಹೀಗೆ

ಹೋದರೆ ಕೆಡುಕಾಗುತ್ತದೆ ನೀನು ಹೀಗೆಯೇ ನಡೆಯಬೇಕು ಎಂಬ ಸೂಚನೆಯನ್ನು ನೀಡುತ್ತದೆ. ಗಾದೆಗಳು ಜೀವನ ಮೌಲ್ಯಗಳನ್ನು ಕಟ್ಟಿಕೊಡುವಲ್ಲಿ ಮಹತ್ತರರವಾದ ಸ್ಥಾನವನ್ನು ವಹಿಸುತ್ತದೆ. ಗಾದೆಯು ವ್ಯಕ್ತಿಯ ಸಾಂಸಾರಿಕ ಜೀವನವಲ್ಲದೆ ಸಾಮಾಜಿಕ, ರಾಜಕೀಯ, ಆರ್ಥಿಕ, ಮಾನಸಿಕ, ಸಾಹತ್ಯಕ, ಸಾಂಸ್ಕೃತಿಕ ಎಲ್ಲಾ ಕ್ಷೇತ್ರಗಳಿಗೂ ಸರ್ವವ್ಯಾಪ್ತಿಯಾಗಿದೆ. ನಗರೀಕರಣದ ಪ್ರಭಾವಕ್ಕೆ ಗಾದೆಯು ಒಳಗಾಗಿದೆ. ನಾಗರಿಕ ಜನತೆಯಲ್ಲಿ ಹೊರಹೊಮ್ಮುವ ಗಾದೆಗಳ ಧಾಟಿ ಶೈಲಿಯೇ ಬೇರೆಯದಾಗಿರುತ್ತದೆ.

ಒಂದು ದೇಶದ ಸಾಹಿತ್ಯದ ಸಮೃದ್ಧಿಗೆ ಗಾದೆಗಳ ಕೊಡುಗೆ ಅಪಾರ. ಲಯ, ಪ್ರಾಸ, ಅಲಂಕಾರ, ರೂಪಕ ಮುಂತಾದ ಸಾಹಿತ್ಯಿಕ ಗುಣಗಳನ್ನು ಒಳಗೊಂಡಿದೆ. ರಾಷ್ಟ್ರೀಯ ಏಕತೆ, ಭಾವೈಕ್ಯತೆ, ಸಾಮರಸ್ಯತೆ, ಹೊಂದಾಣಿಕೆ ಗಾದೆಗಳ ಆಶಯದ ನುಡಗಳಾಗಿವೆ. ಪ್ರತಿಯೊಬ್ಬ ವ್ಯಕ್ತಿಯು ಸತ್ತಾಗಲೂ ಒಬ್ಬೊಬ್ಬ ಕವಿ ಸಾಯುತ್ತಾನೆ ಎಂಬ ಮಾತು ಅಕ್ಷರಶಃ ಸತ್ಯವಾದ ಮಾತು. ಸಾಹಿತ್ಯದ ಶ್ರೀಮಂತಿಕೆಗೆ ಗಾದೆಗಳ ಪಾತ್ರ ಮನನೀಯವಾಗಿದೆ.

ಮನುಷ್ಯನಿಗೆ ಗುಣ, ಮರ್ಯಾದೆ, ಸ್ಥಾನಮಾನ, ಶುದ್ಧ ಸ್ವಭಾವಗಳು ಬಹಳ ಮುಖ್ಯ, ಗಾದೆಗಳ ಮುಖ್ಯ ಉದ್ದೇಶ ಇಂತಹ ಮೌಲ್ಯಗಳನ್ನು ಹಾಗೆಯೇ ಇರಿಸಿಕೊಳ್ಳುವಂತೆ ಮನುಷ್ಯನಿಗೆ ಮಾರ್ಗದರ್ಶನ ನೀಡುತ್ತವೆ. ಇಂತಹ ಮೌಲ್ಯಳಿಗೆ ಕುಂದುಕೊರತೆ ಬಾರದಂತೆ ನೋಡಿಕೊಳ್ಳುತ್ತದೆ. ಮನುಷ್ಯನಿಗೆ ಶಿಕ್ಷೆ ದಂಡನೆಯ ಕೆಲಸಗಳನ್ನು ಗಾದೆಗಳು ಮಾಡುತ್ತವೆ. ಒಟ್ಟಾರೆ ಗಾದೆಗಳು ಒಂದು ದೇಶದ, ಸಾಹಿತ್ಯದ ವ್ಯಕ್ತಿಯ ಜವಾಬ್ದಾರಿ ಮತ್ತು ಅಭಿವೃದ್ಧಿಯ ಕೆಲಸವನ್ನು ನಿರ್ವಹಿಸುತ್ತದೆ.

# ಗ್ರಂಥಸೂಚಿ


೧. ಅರವಿಂದ ಮಾಲಗತ್ತಿ (ಡಾ.) (ಸಂ.) : ಕನ್ನಡ ವಿಷಯ ವಿಶ್ವಕೋಶ, ಜಾನಪದ, ಮಣಿಪಾಲ್ ಪ್ರೆಸ್, ಪ್ರೆಸ್ ಕಾರ್ನರ್, ಮಣಿಪಾಲ್ – ೫೭೬ ೧೦೪, ೨೦೦೬

೨. ಆರ್‍ವಿಯಸ್ ಸುಂದರಂ (ಡಾ.) : ಜನಪದ ಸಾಹಿತ್ಯದ ಮೂಲ ತತ್ವಗಳು, ಅರ್ಕಾವತಿ ಪ್ರಕಾಶನ, ಮೈಸೂರು, ೧೯೭೬.

೩. ತಪಸ್ವೀಕುಮಾರ್ ನಂ. : ಕನ್ನಡ ಗಾದೆಗಳ ಸಮೀಕ್ಷೆ, ಡೈರೆಕ್ಟರ್, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು, ೧೯೭೨.

೪. ಬಸವರಾಜ ನೆಲ್ಲಿಸರ(ಡಾ.) (ಸಂ.) : ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು – ೫೬೦ ೦೦೩.

೫. ರಾಗೌ : ಜನಪದ ಸಾಹಿತ್ಯ ರೂಪಗಳು, ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್ ೧೯, ಜೆ.ಸಿ.ರೋಡ್, ಬೆಂಗಳೂರು–೨, ೧೯೭೮.

೬. ಲಕ್ಕಪ್ಪಗೌಡ ಎಚ್.ಜೆ.(ಸಂ.) : ಸುವರ್ಣ ಜಾನಪದ ಸಂಪುಟ೧, ಚಂದನ ಪ್ರಿಂಟರ್ಸ್ ನಂ. ೬೮೫ ರಾಮಾಂಜನೇಯ ರಸ್ತೆ, ಶ್ರೀನಗರ, ಬೆಂಗಳೂರು ೫೬೦ ೦೫೦, ೧೯೯೮.

೭ ವೆಂಕಟರಮಣಯ್ಯ.ಟಿ.ವಿ. : ಕನ್ನಡ ಗಾದೆಗಳ ಕೋಶ, ಪ್ರತಿಭಾ ಗ್ರಂಥಮಾಲೆ, ಸಮಾಜ ಪುಸ್ತಕಾಲಯ, ಧಾರವಾಡ, ೧೯೬೩.

೮. ಶಂಕರನಾರಾಯಣ.ತೀ.ನಂ.(ಡಾ.) (ಸಂ.) : ಜನಪದ ಸಾಹಿತ್ಯ ಪ್ರಕಾರಗಳು, ವಿನಾಯಕ ಆಫ್ ಸೆಟ್ ಪ್ರಿಂಟರ್ಸ್, ಬೆಂಗಳೂರು, ೨೦೦೪.

೯. ಸುಧಾಕರ (ಸಂ.) : ನಮ್ಮ ಸುತ್ತಿನ ಗಾದೆಗಳು, ಕುಸುಮ ಪ್ರಿಂಟರ್ಸ್, ಮೈಸೂರು–೪, ೧೯೮೭.

# ವಕ್ತೃ ಪರಿಚಯ

| | | | |
|---|---|---|---|
| ದೇವೀರಮ್ಮ | ೩೮ | ಆದಿಕರ್ನಾಟಕ (ಪರಿಶಿಷ್ಟಜಾತಿ) | ಗೃಹಿಣಿ |
| ಪಾರ್ವತಕ್ಕ | ೭೦ | ಮುಳ್ಳುಗೌಡರು(ಒಕ್ಕಲಿಗ) | ಕೂಲಿಗೆಲಸ |
| ತಮ್ಮೇಗೌಡ | ೭೩ | ಮುಳ್ಳುಗೌಡರು(ಒಕ್ಕಲಿಗ) | ವ್ಯವಸಾಯ |
| ಸೋಮಶೇಖರ | ೩೩ | ಲಿಂಗಾಯಿತ | ವ್ಯವಸಾಯ, ಪುರೋಹಿತ |

